ನವಸಾಕ್ಷರ ಪುಸ್ತಕ ಮಾಲೆ ೨೮

# ಬೆಟ್ಟಗುಡ್ಡಗಳು

ಜಿ. ಎನ್. ಅಶೋಕವರ್ಧನ



ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಬೆಟ್ಟಗುಡ್ಡಗಳು

**ಜಿ.ಎನ್. ಅಶೋಕ ವರ್ಧನ**

**ವಿ–ಪುಸ್ತಕಕ್ಕೊಂದು ನನ್ನುಡಿ**

ಪರ್ವತಾರೋಹಣ ನನ್ನ ಹವ್ಯಾಸ. ಹಾಗೆ ಅನುಭವಿಸಿದ್ದನ್ನು ಇತರರಿಗೆ ಪ್ರೇರಣೆ ಕೊಡುವ ನೆಪದಲ್ಲಿ ಲೇಖನ ಮಾಡುವುದೂ ನನಗಷ್ಟೇ ಪ್ರಿಯವಾದ ಕೆಲಸ. ಆ ಲೇಖನಗಳಿಂದ ನಾನು ಗಳಿಸಿರಬಹುದಾದ ಹೆಸರು ಮತ್ತು ಆ ಕಾಲಕ್ಕೆ (೧೯೯೩–೯೪) ಕನ್ನಡ ವಿವಿನಿಲಯ, ಹಂಪಿಯಲ್ಲಿ ನನ್ನ ಹವ್ಯಾಸಗಳನ್ನು ಅರಿತ ಗೆಳೆಯರಾದ ನಾಗಭೂಷಣ ಸ್ವಾಮಿ, ಪುರುಷೋತ್ತಮ ಬಿಳಿಮಲೆಯವರಿಂದ ಹೀಗೊಂದು ಪುಸ್ತಕ ಬರೆಯುವ ಸುಳಿಗೆ ಸಿಕ್ಕಿಕೊಂಡೆ. ವಿಷಯ ಅದರ ಹರಹುಗಳನ್ನು ತಿಳಿಸಿ, ಸುಮಾರು ಒಂದು ತಿಂಗಳ ಬಿಡುವು ಕೊಟ್ಟು, 'ಮಾನುಷಕೃತಿ' (ಮ್ಯಾನುಸ್ಕ್ರಿಪ್ಟ್ ಅರ್ಥಾತ್ ಹಸ್ತಪ್ರತಿ) ಹಿಡಿದುಕೊಂಡೇ ಹಂಪಿಗೆ ಬರಲು ಪತ್ರ ಬಂತು. ಇಲ್ಲೇ ಹಿಂದೆ 'ಪಂಚಾಂಗ ಎಷ್ಟು ನಿಜ?' ಎಂಬ ನನ್ನ ತಂದೆಯ (ಜಿಟಿನಾ) ಪುಸ್ತಕದ ಪ್ರೇರಕರಾದ ಲೋಕಶಿಕ್ಷಣ ಇಲಾಖೆಯೇ ಇಲ್ಲೂ ಕಾರಣಕರ್ತ. ಅದರ ನವಸಾಕ್ಷರರ ಪುಸ್ತಕ ಮಾಲೆಯಲ್ಲಿ ನೂರಾಹತ್ತು ಪುಸ್ತಕಗಳನ್ನು ಬರೆಯಿಸಿ, ಪ್ರಕಟಿಸಿ ಕೊಡುವ ಜವಾಬ್ದಾರಿಯನ್ನು ಕವಿವಿ ಹಂಪಿ ತುಂಬ ಗಂಭೀರವಾಗಿ ಕೈಗೆತ್ತಿಕೊಂಡಿತ್ತು.

ಅನುಭವದ ನಿರೂಪಣೆ (ಪ್ರವಾಸ ಸಾಹಿತ್ಯ) ಬೇರೆ, ಶಾಸ್ತ್ರಗ್ರಂಥ ರಚನೆ (ಭೂ ವಿಜ್ಞಾನ) ಬೇರೆ ಎನ್ನುವ ತಿಳುವಳಿಕೆ ನನಗಿತ್ತು. ಇಲ್ಲಿ ಅನುಭವದ ಗಳಿಕೆಗೆ ಶಾಸ್ತ್ರದ ಮೆರುಗು ಕೊಡಲು, ಅದೂ ಪ್ರಾಥಮಿಕ ಮಟ್ಟದ್ದು 'ಒಳ್ಳೇಸಮಯ, ಒಳ್ಳೇ ಸಮಯ' ಎಂದೇ ಒಪ್ಪಿಕೊಂಡೆ. ಅದು ಇಂದಿನಂತೆ ಬೆರಳ ತುದಿಗೆ ಮಾಹಿತಿ ಬೆಟ್ಟವನ್ನೇ ರಾಶಿಹಾಕುವ ಅಂತರ್ಜಾಲದ ಕಾಲವಲ್ಲ. ಆದರೆ ಪುಸ್ತಕ ಮಳಿಗೆಯ ಮಾಲಿಕನೇ ಆದ್ದರಿಂದ 'ಕಳ್ಳತನವ ಮಾಡಲೆನಗದು ಒಳ್ಳೇ' ಅವಕಾಶಗಳಾನ್ನೇ ಕೊಟ್ಟಿತು! ಹಲವು ಪುಸ್ತಕಗಳಿಂದ ಭಟ್ಟಿ ಇಳಿಸಿ, ನನ್ನದೊಂದಷ್ಟು ನೀರು ಬೆರೆಸಿ ಏನೋ ಮಾಡಿಕೊಂಡು ಹಂಪಿ ಸೇರಿದೆ. ವಿಜಯನಗರ ಕಾಲದಲ್ಲಿ ಮುತ್ತು ರತ್ನಗಳನ್ನು ರಾಶಿ ಹಾಕಿಕೊಂಡು ಮಾರುತ್ತಿದ್ದ ಕರಿಕಲ್ಲ ಮಂಟಪಗಳ ಸಾಲಿನಲ್ಲೇ ವಿವಿನಿಲಯ ಕೆಲಸ ನಡೆಸಿತ್ತು. (ಇಂದಿನ ಭವ್ಯ ವಠಾರ, ಕಟ್ಟಡಗಳು ಇರಲಿಲ್ಲ.) ಹೊಸ ಪರಿಚಯಗಳು, ಹಳೇ ನೆನಪುಗಳ ನಡುವೆ ಹಸ್ತಪ್ರತಿಯ ಚರ್ಚೆ, ಹೊಸ ಮಾರ್ಗಸೂಚೀ ಸಲಹೆಗಳು ಸಿಕ್ಕವು. ಬಳ್ಳಾರಿಯ ಸೆಕೆ, ವಿದ್ಯುತ್ ವೈಫಲ್ಯ, ಬಂಡೆಗಳ ಪ್ರತಿಫಲನದಲ್ಲಿ ನಾನು ಬೆಂದೋ, ಸೀದೋ, ಹುರಿದೋ ಹೋಗಿದ್ದರೂ ಮಧ್ಯಾಹ್ನದ ಹೊಟ್ಟೆಪಾಡಿನ ಸಮಸ್ಯೆ ಬಂತು. (ದೇವಸ್ಥಾನದೆದುರಿನ ಡಬ್ಬಾ ಹೋಟೆಲುಗಳು ನನಗೆ ಸಾಕಾಗುತ್ತಿತ್ತು) ಆದರೆ ನಾಗಭೂಷಣ ಸ್ವಾಮಿಗೆ ಮತಂಗ ಪರ್ವತದೆದುರಿನ ಭಾರೀ ಬಂಡೆಗಳ ರಾಶಿಯೇ ಎಂಬಂತಿದ್ದ ಗುಡ್ಡದ ನೆತ್ತಿಗೇರಲು ಇದ್ದ ರಹಸ್ಯ ಜಾಡೊಂದನ್ನು ನನಗೆ ತೋರಿಸುವ ಸಂಭ್ರಮ. ಹೋಟೆಲಿಗೆ ಬಿಡದೆ, ಈ 'ಭಟ್ಟ'ನ ಹೊಟ್ಟೆಗೆ ಬಿಳಿಮಲೆಯ ರೊಟ್ಟಿಯೂ ಸ್ವಾಮಿಯ ಪಲ್ಯ ಸೇರಿಸಿದ್ದಕ್ಕೆ ರಹಮತ್ ತರೀಕೆರೆ ಟೊಮೆಟೋ ಸಾಕ್ಷಿ ಹಾಕಿದರು.  ತಿಂದದ್ದು ಜಠರ ಮುಟ್ಟುವ ಮೊದಲೇ ಬೆಟ್ಟ ಹತ್ತಿ ಬಂದದ್ದೂ ಆಯ್ತು! ಮತ್ತಷ್ಟು ಚರ್ಚೆ, ಟಿಪ್ಪಣಿ ಸೇರಿಸಿಕೊಂಡು ಮಂಗಳೂರಿಸಿದ್ದೆ. ಕಾಲಾನುಕ್ರಮದಲ್ಲಿ ಪರಿಷ್ಕೃತ ಹಸ್ತಪ್ರತಿ, ಚಿತ್ರ ಸೂಚನೆಗಳನ್ನು ಅಂಚೆಯಲ್ಲಿ ರವಾನಿಸಿಬಿಟ್ಟೆ. ಮುಂದೊಂದು ಕಾಲದಲ್ಲಿ ಅಲ್ಲಿ ಸಂಪಾದಕೀಯ ತಿದ್ದುಪಡಿಗಳಿಗೊಳಗಾಗಿ ಈ ಪುಸ್ತಕ ಬಂದಾಗಲೇ ತಿಳಿದದ್ದು ಈ ಪುಸ್ತಕ 'ನನ್ನದು!'

ಏನೇ ಇರಲಿ, ವಿಷಯಕವಾಗಿ ಪ್ರಾಥಮಿಕ ಮಾಹಿತಿಗಳನ್ನಂತೂ ಸಂಗ್ರಹಿಸಿ ಕೊಡುವ ಆ ಪುಸ್ತಕವನ್ನು ನವಸಾಕ್ಷರ ಮಾಲೆಯ ೨೮ನೇ ಕುಸುಮ. ಕೆ. ಮಕಾಳಿಯವರ ಸುಂದರ ಚಿತ್ರಗಳೊಡನೆ ಬೆಂಗಳೂರಿನ ಗುರುದತ್ ಪ್ರಿಂಟರ್ಸಿನಲ್ಲಿ ಸಾಕಷ್ಟು ಸುಂದರವಾಗಿಯೇ ಮುದ್ರಣಗೊಂಡು, ಪ್ರಕಟವಾದ (೧೯೯೪, ೨ + ೨೬ ಪುಟ, ಬೆಲೆ ರೂ ೮) ಪುಸ್ತಕವನ್ನು ಈಗ ಯಥಾವತ್ತು ವಿ–ಮಾಧ್ಯಮದಲ್ಲಿ ಪ್ರಕಟಿಸಲು ನಾನು ಹರ್ಷಿಸುತ್ತೇನೆ.

ಜಿ.ಎನ್.ಅಶೋಕವರ್ಧನ

ಅತ್ರಿ ವಿ–ಪುಸ್ತಕ
ಅಭಯಾದ್ರಿ, ಪಿಂಟೋರವರ ಓಣಿ
ಕರಂಗಲ್ಪಾಡಿ, ಮಂಗಳೂರು ೫೭೫೦೦೩ ಕರ್ನಾಟಕ
athreebook@gmail.com
www.athreebook.com

# ಬೆಟ್ಟ ಗುಡ್ಡಗಳು

**ಪೀಠಿಕೆ**

ಪೂರ್ಣಮಿ ದಿಬ್ಬ, ಸಿದ್ಧರ ಗುಡ್ಡ, ಚಾಮುಂಡಿ ಬೆಟ್ಟ ನೀವು ನೋಡಿರಬಹುದು. ನೀಲಗಿರಿ ಶ್ರೇಣಿ, ಹಿಮಾಲಯ ಸರಣಿ ನೀವು ಕೇಳಿರಬಹುದು. ಇವೆಲ್ಲ ನಮ್ಮ ನೆಲದಿಂದ ಒಮ್ಮೆಗೇ ಮೇಲೆದ್ದು ನಿಂತಂಥ ಜಾಗಗಳು. ಸುಲಭದಲ್ಲಿ ಗುಡ್ಡಬೆಟ್ಟಗಳು ಅಂದು ಬಿಡಬಹುದಾದ ಎತ್ತರಗಳು.

ಹಿಂದೆ ಮಹಾನವಮಿಯಂದು ರಾಜಸಭೆ ನಡೆಯುತ್ತಿತ್ತು. ಅದು ಊರಮಂದಿಗೆ ಕಾಣಲು ಬಳಸಿದ ಎತ್ತರ ಪೂರ್ಣಮಿ ದಿಬ್ಬ. ಹಂಪಿಯಲ್ಲಿ ಅದು ಇಂದಿಗೂ ಇದೆ. ಸಿದ್ಧರು ತಪಸ್ಸು ಮಾಡಲು ಗುಡ್ಡ ಬಯಸಿದರು. ಜನರ ಬಾಯಲ್ಲಿ ಅದು ಸಿದ್ಧರಗುಡ್ಡೆ. ಮೈಸೂರಿನ ಉತ್ಸವಗಳಲ್ಲಿ ಚಾಮುಂಡೇಶ್ವರಿ ದೇವಿ ಮೆರೆಯುತ್ತಾಳೆ. ಊರಹಿತ್ತಲಿನ ಬೆಟ್ಟದ ಮೇಲೆ ಇವಳ ಗುಡಿ. ಸಹಜವಾಗಿ ಆ ಬೆಟ್ಟವೇ ಇಂದು ಚಾಮುಂಡಿ ಬೆಟ್ಟ.

ಕುರುಂಜಿ ಎಂಬ ನೀಲ ಹೂ ಹನ್ನೆರಡು ವರ್ಷಕ್ಕೊಮ್ಮೆ ಅರಳುತ್ತದೆ. ಇವು ಬೆಟ್ಟಗಳ ಚಳಿ ವಾತಾವರಣವನ್ನೇ ಬಯಸುತ್ತವೆ. ಊಟಿಯ ಬೆಟ್ಟ ಸಾಲಿನಲ್ಲಿ ಕುರುಂಜಿಯ



ಗುಡ್ಡದ ಒಂದು ಮಾದರಿ



ಗುಹಿಯ ಒಂದು ನೋಟ

ಅರಳು ಕಂಡ ಜನ ನೀಲಗಿರಿ ಶ್ರೇಣಿ ಎಂದೇ ಕರೆದರು. ಹಿಮ ಹೊತ್ತ ಬೆಟ್ಟ ಹಿಮಾಲಯ.

ನಮಗೆ ಕಾಣಿಸಿದ್ದೇ ಬೆಟ್ಟಗುಡ್ಡಗಳ ಹೆಸರಾಗಬಹುದು. ಮಾರ್ನಮಿ, ಸಿದ್ಧ ಇತ್ಯಾದಿ. ನಮ್ಮ ಉಪಯೋಗಕ್ಕೆ ಸಿಕ್ಕಿದ್ದೇ ಹೆಸರಾಗಬಹುದು. ಚಾಮುಂಡಿ, ಹಿಮಾಲಯ ಇತ್ಯಾದಿ. ಹೀಗೇನೂ ಇಲ್ಲದೆಯೂ ಎತ್ತರಗಳನ್ನು ಹೆಸರಿಸಬಹುದು. ದಿಬ್ಬ, ಗುಡ್ಡ, ಬೆಟ್ಟ ಇತ್ಯಾದಿ. ಜಗತ್ತಿನ ಎರಡನೇ ಅತಿ ಎತ್ತರದ ಶಿಖರವನ್ನು ಬರಿದೇ ಕೆ2 ಎಂದಿದ್ದಾರೆ. ಒಂದಕ್ಕೇ ಎರಡು ಹೆಸರಿರಲೂಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಜನ ಕುಮಾರಪರ್ವತ ಎಂದದ್ದನ್ನೇ ಕೊಡಗಿನವರು ಪುಷ್ಪಗಿರಿ ಎನ್ನುತ್ತಾರೆ.

## ವಿಂಗಡಣೆ

ದಿಬ್ಬ ಅಂದರೆ ನೆಲದ ಸಣ್ಣ ಉಬ್ಬು. ಇದು ಸಹಜವಿರಬಹುದು, ಮನುಷ್ಯ ಮಾಡಿದ್ದೂ ಇರಬಹುದು. ಗುಡ್ಡೆ ದಿಬ್ಬಕ್ಕಿಂಥ ಎತ್ತರ. ಗುಡ್ಡೆಯನ್ನು ಮನುಷ್ಯ ಮಾಡಿದ ಉದಾಹರಣೆ ಇಲ್ಲ. ಗುಡ್ಡೆಯನ್ನು ಮೀರಿದ ಎತ್ತರವೇ ಬೆಟ್ಟ.

ಗುಡ್ಡ ಬೆಟ್ಟಗಳ ಸ್ಪಷ್ಟನೆತ್ತಿಯನ್ನು ಶಿಖರ ಅನ್ನುತ್ತಾರೆ. ಸಾಮಾನ್ಯವಾಗಿ ಬೆಟ್ಟಗಳನ್ನು ಶಿಖರದಿಂದಲೇ ಗುರುತಿಸುತ್ತಾರೆ. ಎವರೆಸ್ಟ್ ಒಂದು ಶಿಖರವೂ ಹೌದು, ಬೆಟ್ಟವೂ ಹೌದು. ಇಂಥ ಬೆಟ್ಟಗಳ ಸಾಲೇ ಶ್ರೇಣಿ. ಕುದುರೆಮುಖ ಶ್ರೇಣಿಯಲ್ಲಿ ಕುದುರೆಮುಖ ಕಡಕೇಜಗುಡ್ಡೆ, ಕಡಮಾಡಿಕಲ್ಲು ಮುಂತಾದ ಬೆಟ್ಟಗಳಿವೆ.

ಹಲವು ಬೆಟ್ಟ ಸಾಲುಗಳು ಸೇರಿದ್ದು ಸರಣಿ. ಹಿಮಾಲಯ ಜಗತ್ತಿನಲ್ಲೇ ಹೆಸರುವಾಸಿಯಾದ ಒಂದು ಪರ್ವತಸರಣಿ.ಇದು ಪೂರ್ವ- ಪಶ್ಚಿಮವಾಗಿ ಸುಮಾರು ಎರಡು ಸಾವಿರದ ನಾಲ್ಕು ನೂರು ಕಿಲೋ ಮೀಟರ್ ಉದ್ದ ಇದೆ. ದಕ್ಷಿಣ – ಉತ್ತರವಾಗಿ ಕಡಿಮೆ ಎಂದರೂ ನೂರಾ ಅರವತ್ತು ಕಿಲೋ ಮೀಟರ್ ಅಗಲಕ್ಕೆ ವ್ಯಾಪಿಸಿದೆ. ಜಗತ್ತಿನ ಅತಿ ಎತ್ತರದ ಐವತ್ತು ಶಿಖರಗಳನ್ನು ಪಟ್ಟಿ ಮಾಡಿದರೆ ಮೊದಲ ಹನ್ನೊಂದೂ ಹಿಮಾಲಯದ ಶಿಖರಗಳು. ಹಿಮಾಲಯದಲ್ಲಿ ಅಸಂಖ್ಯ ಶ್ರೇಣಿಗಳಿವೆ. ಶಿವಾಲಿಕ, ಕಾರಕೊರಂ ಇತ್ಯಾದಿ.

ಬೆಟ್ಟ ಬೆಟ್ಟಗಳನ್ನು ಸಂಪರ್ಕಿಸುವ ಎತ್ತರ ಏಣು. ಇವು ಶಿಖರಗಳಿಂದ ತಗ್ಗಿನಲ್ಲೇ ಉಳಿಯುತ್ತವೆ. ಶ್ರೇಣಿಯ ಉದ್ದಕ್ಕೆ ಹಬ್ಬಿದವು ಮಹಾಏಣುಗಳು. ಬೆಟ್ಟದ ನೆತ್ತಿಯಿಂದ ಬುಡದ ಕಡೆಗೆ ಚಾಚಿದವು ಸಣ್ಣ ಏಣುಗಳು. ಸಣ್ಣ ಏಣುಗಳು ಬೆಟ್ಟದ ಮೈಯಲ್ಲಿ ಅಸಮಾನ ಧಾರೆಗಳನ್ನು ಮೂಡಿಸುತ್ತವೆ. ವಾಸ್ತವದಲ್ಲಿ ಬೆಟ್ಟದ ಎರಡು ಮಗ್ಗುಲುಗಳು ಸೇರಿದ ಉಬ್ಬುರೇಖೆ ಏಣು.

ಏಣು ಗಡಿರೇಖೆಯಿದ್ದಂತೆ. ನಮ್ಮ ಪಶ್ಚಿಮ ಘಟ್ಟದ ಮಹಾ ಏಣನ್ನೇ ನೋಡಿ. ಇದು ಕರಾವಳಿ ಮತ್ತು ಮಲೆನಾಡಿನ ಬದುಕನ್ನು ಬೇರೆ ಬೇರೆ ರೀತಿಯಲ್ಲಿ ರೂಪಿಸಿದೆ. ಇಲ್ಲಿ ಕೇವಲ ಹತ್ತಿಪ್ಪತ್ತು ಮೀಟರುಗಳ ಅಂತರದಲ್ಲಿ ತೊರೆಗಳು ಜಿನುಗುತ್ತವೆ. ಒಂದು ಅವಸರಿಸಿ ಅರಬ್ಬೀ ಸಮುದ್ರ ಸೇರುತ್ತದೆ. ಮತ್ತೊಂದು ನಿಧಾನಿಸಿ, ಪ್ರಸ್ಥಭೂಮಿಯನ್ನು ಅಲೆದು ಬಂಗಾಲ ಕೊಲ್ಲಿಗೆ ಹೋಗುತ್ತದೆ.

ಬೆಟ್ಟದ ಮಗ್ಗುಲುಗಳು ಸಂಧಿಸುವಲ್ಲಿ ಹಳ್ಳ ಬಿದ್ದರೆ ಅದು ಕಣಿವೆ. ಇದು ಎರಡು ಏಣುಗಳ ನಡುವಿನ ಅತಿ ತಗ್ಗಿನ ರೇಖೆಯೂ ಹೌದು. ಬೆಟ್ಟದ ಸವಕಳಿಯಿಂದ ಎದ್ದ ಕಲ್ಲು ಮಣ್ಣುಗಳು ಕಣಿವೆಗೇ ಜಾರುತ್ತವೆ. ಬೆಟ್ಟದ ಮೇಲೆ ಸುರಿದ ಮಳೆ ನೀರು, ಹಾಗೂ ಒಳಸ್ತರಗಳ ನೀರ ಹರಿವು ಎರಡೂ ಕಣಿವೆಯೆಡೆಗೇ. ಸಹಜವಾಗಿ ಒರತೆ ಝರಿಗಳೂ ಕಣಿವೆಗಳಿಗೇ ಮೀಸಲು. ಇದರಿಂದ ಸಾರವತ್ತಾದ ಮಣ್ಣು ಧಾರಾಳ ನೀರು ಕಣಿವೆಯಲ್ಲಿರುತ್ತವೆ. ಜೊತೆಗೆ ಬಿಸಿಲೂ ಸಿಗುವುದರಿಂದ ಕಣಿವೆಗಳಲ್ಲಿ ಕಾಡು ಸದಾ ದಟ್ಟವಾಗಿರುತ್ತವೆ.

## ಬೆಟ್ಟಗಳ ಹುಟ್ಟು ಸಾವು

ಭೂಮಿಯ ಮೇಲೆ ಜೀವಿಗಳು ರೂಪುಗೊಳ್ಳುವ ಮೊದಲೇ ಬೆಟ್ಟ ಗುಡ್ಡಗಳು ಇದ್ದವು. ಇಂದೂ ಮುಂದೂ ಇವು ಮೊಳೆದು, ಬೆಳೆದು, ನಶಿಸುವುದು ನಡೆದೇ ಇದೆ. ಹಾಗಾಗಿ ಪುರಾಣಗಳು ಕೆಲವೆಡೆಗಳಲ್ಲಿ ಬೆಟ್ಟಗಳನ್ನು ಜೀವಿಗಳು ಎಂದಿವೆ. ಹಿಂದೆ ಬೆಟ್ಟಗಳಿಗೆ ರೆಕ್ಕೆ ಇತ್ತು. ಅವು ಖುಷಿ ಬಂದಂತೆ ಹಾರಿ, ಕುಳಿತು ಅಪಾರ ಜೀವಹಾನಿ ಮಾಡುತ್ತಿದ್ದವು.

ಲೋಕ ಹಿತಕ್ಕಾಗಿ ದೇವೇಂದ್ರ ಬೆಟ್ಟಗಳ ರೆಕ್ಕೆ ಕತ್ತರಿಸಿದ ಎಂಬ ಕಥೆ ಇದೆ.

ಬೆಟ್ಟ ತಂದೆ, ಕಾಡು ತಾಯಿ, ಹೊಳೆ ನದಿಗಳು ಹೆಣ್ಣುಮಕ್ಕಳು, ಸಮುದ್ರ ಅಳಿಯ. ಈ ಕಲ್ಪನೆಯನ್ನು ಎಲ್ಲ ಕಾಲದ ಸಾಹಿತ್ಯದಲ್ಲೂ ಕಾಣಬಹುದು. ಬೆಟ್ಟಗಳ ಬಗೆಗಿನ ನಂಬಿಕೆ ಗೌರವ ಎಲ್ಲ ಕಾಲದ ಸಾಹಿತ್ಯದಲ್ಲೂ, ಎಲ್ಲ ದೇಶಗಳಲ್ಲೂ ಕಾಣುತ್ತೇವೆ. ಕೈಲಾಸ ಹಿಮಶಿಖರದಲ್ಲಿದ್ದಾನೆ ನಮ್ಮ ಶಿವ. ಗ್ರೀಕ್ ದೇವತೆಗಳ ವಾಸ ಒಲಿಂಪಸ್ ಎಂಬ ಬೆಟ್ಟದ ಮೇಲೆ. ಗೊಲ್ಗೋಥಾ ಎಂಬ ಬೆಟ್ಟದ ಮೇಲೆ ಕ್ರಿಸ್ತನನ್ನು ಶಿಲುಬೆಗೇರಿಸಿದರು. ವಾಸ್ತವದಲ್ಲಿ ಬೆಟ್ಟಗುಡ್ಡಗಳು ಅಂದರೇನು ? ಅವುಗಳ ಹುಟ್ಟು, ಬೆಳವಣಿಗೆ, ಸಾವು ಎಂದರೇನು ? ಇದು ತಿಳಿಯುವುದಕ್ಕೆ ಭೂಮಿಯ ಹುಟ್ಟಿನ ಕಡೆಗೆ ನೋಡೋಣ.

## ಭೂಮಿಯ ಹುಟ್ಟು




ಸೂರ್ಯ ಒಂದು ಮಹಾಕುಲುಮೆ. ಹಲವು ಕೋಟಿ ವರ್ಷಗಳ ಹಿಂದೆ ಅದರಿಂದ ಸಿಡಿದ ಒಂದು ಕಿಡಿ ಭೂಮಿಯಾಗಿ ಹುಟ್ಟಿರಬೇಕು ಎನ್ನುತ್ತಾರೆ. ಆಗ ಭೂಮಿ ಕುದಿ ಬಿಸಿಯ ಅರಗಿನ ಉಂಡೆಯಂತಿತ್ತು. ತಣಿಯುತ್ತ ಬಂದಂತೆ, ಹಾಲು ಕೆನೆಗಟ್ಟಿದಂತೆ,

ಭೂಮಿಯ ಹೊರವಲಯ ಹೆಪ್ಪುಗಟ್ಟಿತು. ಭೂಮಿಯ ಒಳಗೆ ಮೂಲವಸ್ತು ಇಂದಿಗೂ ಕುದಿಯುತ್ತಲೇ ಇದೆ. ಬಹಳ ಗಟ್ಟಿ ಬಂಡೆಯಂತೆ ಇದೆ. ಸಾಮಾನ್ಯ ಅಂದಾಜುಗಳಿಗೆ ನಿಲುಕದ ಶಾಖ ಹಾಗೂ ಒತ್ತಡ ಒಳಗಿದೆ. ಭೂಮಿ ಇನ್ನೂ ತಣಿಯುತ್ತಲೇ ಇದೆ.

ಭೂಮಿಯ ಒಳಗಿನ ವಿವಿಧ ಹಂತಗಳನ್ನು ತೋರವಾಗಿ ನಾಲ್ಕು ಭಾಗಗಳಲ್ಲಿ ಗುರುತಿಸಬಹುದು. ಒಳ ತಿರುಳು, ಹೊರತಿರುಳು, ಮ್ಯಾಂಟಲ್ ಮತ್ತು ಚಿಪ್ಪು. ಇವುಗಳಲ್ಲಿ ಚಿಪ್ಪು ಹೊರಗಿನದು, ಅತಿ ತಣ್ಣಗಿನದು ಮತ್ತು ಹಗುರದ್ದೂ ಆಗಿದೆ. ಇದು ಎಲ್ಲಾ ಜೀವಿಗಳ ಮತ್ತು ಜೀವಪೋಷಕಗಳ ನೆಲೆ. ಚಿಪ್ಪಿನಲ್ಲಿ ಏಕಾಣು ಜೀವಿಯಿಂದ ತಿಮಿಂಗಿಲದವರೆಗೆ, ಪಕ್ಷಿ ಪ್ರಾಣಿಗಳಿವೆ.

## ಅಗ್ನಿ ಪರ್ವತಗಳು



ಮ್ಯಾಂಟಲ್ ವಲಯ ಕುದಿಯುತ್ತಿರುವ ಶಿಲಾರಸ. ಇದನ್ನು ಮ್ಯಾಗ್ಮಾ ಅನ್ನುತ್ತಾರೆ. ಚಿಪ್ಪು ಇದರ ಮೇಲೆ ತೇಲುವ ತೆಪ್ಪ. ಈ ತೆಪ್ಪದಲ್ಲಿ ತೂತಗಳು ಬಿದ್ದದ್ದುಂಟು, ಬೀಳುತ್ತಲೂ ಇರುತ್ತವೆ.ಇವುಗಳ ಮೂಲಕ ಶಿಲಾರಸ ನುಗ್ಗುತ್ತದೆ. ಅದು ಒಳಗಿನ ಒತ್ತಡ ಮತ್ತು ಬಿಸಿಯೊಡನೆ ಬರುವಾಗ ಕಲ್ಲು ಮಣ್ಣನ್ನು ಕೊಚ್ಚುತ್ತದೆ. ಎಲ್ಲ ಹೊತ್ತು ನೆಲದ ಮೇಲೆ ಉಕ್ಕುವಾಗ ಬೆಂಕಿಯೇ ಆಗಿರುತ್ತದೆ. ಇದನ್ನು ಜ್ವಾಲಾಮುಖಿ ಎನ್ನುತ್ತಾರೆ. ಜ್ವಾಲಾಮುಖಿಗಳಲ್ಲಿ ವರ್ಷಾನುಗಟ್ಟಳೆ ಶಿಲಾರಸ ಹರಿಯುವುದುಂಟು. ಶಿಲಾರಸ ಸುತ್ತ ಹರಡಿ ತಣಿದು ಗಟ್ಟಿಯಾಗಿರುತ್ತದೆ. ಸಹಜವಾಗಿ ಸುತ್ತಲಿನ ನೆಲ, ಜೊತೆಗೆ ಅಗ್ನಿ ಮುಖಿ ಮೇಲೇರುತ್ತದೆ. ಅಗ್ನಿ ಪರ್ವತವೇ ಆಗುತ್ತದೆ.

ಕಾಲಕಳೆದಂತೆ ಅಗ್ನಿಮುಖಿ ಶಾಂತವಾಗಬಹುದು. ಹೂವರಳಿ ಹಕ್ಕಿಗಳು ಹಾಡುವ ಸಾಮಾನ್ಯ ಬೆಟ್ಟವಾಗಬಹುದು. ಆಫ್ರಿಕಾದ ಅತಿ ಎತ್ತರದ ಶಿಖರ ಕಿಲಿಮಂಜಾರೋ ಅದು ಇಂದು ಪೂರ್ಣ ಶಾಂತ ಅಗ್ನಿಪರ್ವತ. ಅಗ್ನಿ ಪರ್ವತ ಮತ್ತೊಮ್ಮೆ ಕೆರಳಿ ಬೆಳೆಯಲೂಬಹುದು. ಜಪಾನಿನ ಫ್ಯೂಜಿಯಾಮಾ ಅಗ್ನಿ ಪರ್ವತ ಇಂದು ಶಾಂತವಾಗಿದೆ. ಆದರೆ ಇದರಲ್ಲಿ ಜ್ವಾಲಾಮುಖಿ ಪುನಃ ಸಿಡಿಯುವ ಸೂಚನೆಗಳು ಇವೆಯಂತೆ. ಅಗ್ನಿ ಮುಖಿ ಸಿಡಿತದ ರಭಸ ಹೆಚ್ಚುವುದೂ ಉಂಟು. ಆಗ ಪರ್ವತ ಹುಡಿಯಾಗಿ ಮರೆಯಾಗಬಹುದು. ಕ್ರಕೋಟ ಎಂಬ ದ್ವೀಪ, ಸಮುದ್ರದ ಆಳದಿಂದ ಎದ್ದ ಅಗ್ನಿ ಪರ್ವತ. ಸುಮಾರು ನೂರು ವರ್ಷಗಳ ಹಿಂದೆ ಆದ ಒಂದು ಸಿಡಿತದಲ್ಲಿ ಇದು ಪೂರ್ಣ ನಾಶವಾಗಿ ಹೋಯಿತು.

## ಫಲಕಗಳು

ಚಿಪ್ಪಿನ ದಪ್ಪದಲ್ಲಿ ಹಲವು ಪದರಗಳಿವೆ. ಇವುಗಳನ್ನು ಸ್ತರಗಳೆಂದೇ ಗುರುತಿಸುತ್ತಾರೆ. ಸ್ತರಗಳ ಸಂಖ್ಯೆ ಮತ್ತು ದಪ್ಪ ಒಂದೊಂದು ಪ್ರದೇಶಕ್ಕೂ ಬೇರೆ ಇರುತ್ತದೆ. ಅದರ ಅತ್ಯಂತ ಕೆಳಸ್ತರ ಬಹಳ ಗಟ್ಟಿಯ ಕಲ್ಲಿನಿಂದಾಗಿರುತ್ತದೆ. ಇದರಲ್ಲಿ ಬಿದ್ದ ತೂತೇ ಅಗ್ನಿಪರ್ವತ ಆಗುತ್ತದೆ ಎನ್ನುವುದನ್ನು ತಿಳಿದಿದ್ದೇವೆ. ಇದರಲ್ಲಿ ಬಿರುಕುಗಳೂ ಮೂಡಿರುತ್ತವೆ. ಈ ಬಿರುಕುಗಳಿಂದ ಪ್ರತ್ಯೇಕವಾದ ತುಣುಕುಗಳೇ ಫಲಕಗಳು. ಫಲಕಗಳಲ್ಲಿ

ಸಾಗರದ ತಳವೂ ಸೇರಿದಂತೆ ಒಟ್ಟು ನೆಲವಿದೆ. ಸಾಗರಗಳ ಮೇಲೆ ಕಾಣುವ ನೆಲದ ತುಣುಕುಗಳನ್ನು ಖಂಡಗಳು ಎನ್ನುತ್ತಾರೆ. ಫಲಕಗಳ ಮತ್ತು ಖಂಡಗಳ ಸಂಖ್ಯೆಯೂ ಏಳೇ ಆಗಿರುವುದು ಆಕಸ್ಮಿಕ.

ಫಲಕಗಳು ಪರಸ್ಪರ ಮುಟ್ಟಿಕೊಂಡು ಮುಂದುವರಿಯಬಹುದು. ಅವು ದೂರವೂ ಆಗಬಹುದು. ಒಂದಕ್ಕೊಂದು ಡಿಕ್ಕಿ ಹೊಡೆಯಬಹುದು. ಫಲಕ ದೂರಾದಾಗ ಬಿಡುವ ಸೆರೆಗೆ ಮ್ಯಾಗ್ಮಾ ಉಕ್ಕುತ್ತದೆ. ಪಸರಿಸಿ ಗಟ್ಟಿಗೊಂಡು ಚಿಪ್ಪನ್ನು ವಿಸ್ತರಿಸುತ್ತದೆ. ಆದರೆ ಫಲಕಗಳು ಡಿಕ್ಕಿ ಹೊಡೆದಲ್ಲಿ ನೆಲ ಮೇಲಕ್ಕೆದ್ದು ಬೆಟ್ಟಗುಡ್ಡಗಳಾಗುತ್ತವೆ. ಹೀಗೆ ರೂಪಗೊಂಡ ಬೆಟ್ಟಗಳಲ್ಲಿ ಎರಡು ವಿಧ.

## ನೆರಿಗೆ ಪರ್ವತಗಳು

ಎರಡು ಸಮಾನ ಶಕ್ತಿಯ ಫಲಕಗಳು ಡಿಕ್ಕಿ ಹೊಡೆದಾಗ ಫಲಕಗಳು ಒಳಗೊಳಗೇ ಪುಡಿಯಾಗುತ್ತವೆ. ಮೇಲ್ಮೈಯಲ್ಲಿ ನೆರಿಗೆಗಳು ಮಾತ್ರ ಮೂಡುತ್ತವೆ. ಈ ದೊಡ್ಡ ನೆರಿಗೆಗಳೇ ನೆರಿಗೆ ಬೆಟ್ಟಗಳು. ಇದರಲ್ಲಿ ಚಿಪ್ಪಿನ ಸ್ತರಗಳು ಉಬ್ಬಿಗೆ ಸರಿಯಾಗಿ ಬಾಗಿಕೊಳ್ಳುತ್ತವೆ. ಆದರೆ ಕಾಲಕಳೆದಂತೆ ಶಿಖರ ಪ್ರದೇಶ ಸವೆಯುತ್ತದೆ. ಕಣಿವೆ ಪ್ರದೇಶದಲ್ಲಿ ಮಡ್ಡಿ ಸೇರಿಕೊಳ್ಳುತ್ತದೆ. ಆಗ ಭೂ ಲಕ್ಷಣಗಳೇ ಬೇರೆ ಬೇರಾದಂತೆ ತೋರುತ್ತವೆ.



ನೆರಿಗೆ ಪರ್ವತಗಳು

ನೆರಿಗೆ ಪರ್ವತಗಳಿಗೆ ಹಿಮಾಲಯ ಬಲುದೊಡ್ಡ ಉದಾಹರಣೆ. ಸುಮಾರು ಏಳು ಕೋಟಿ ವರ್ಷಗಳ ಹಿಂದೆ ಭಾರತದ ಉತ್ತರ ದಿಕ್ಕಿನಲ್ಲಿ ಪರ್ವತಗಳಿರಲ್ಲಿಲ್ಲ. ತೆಥಿಸ ಎಂಬ ಸಾಗರವಿತ್ತು. ಸಾಗರದ ಉತ್ತರಕ್ಕೆ ಯುರೇಷಿಯಾ ಫಲಕವಿತ್ತು. ಅದು ದೃಢವಾಗಿ ನಿಂತಿತ್ತು. ಭಾರತ ಆಸ್ಟ್ರೇಲಿಯಾ ಖಂಡಗಳನ್ನು ಬೇರೊಂದು ಫಲಕ ಹೊತ್ತಿತ್ತು. ಇದು ಉತ್ತರ ದಿಕ್ಕಿಗೆ ಚಲಿಸತೊಡಗಿತು. ವೇಗವೋ ಆಮೆ ಓಟ ! ವರ್ಷಕ್ಕೆ ಕೆಲವೇ ಸೆಂಟಿಮೀಟರ ಮಾತ್ರ. ಓಟದಲ್ಲಿ ಮೊಲದೊಡನೆ ಆಮೆ ಗೆಲ್ಲಲಿಲ್ಲವೇ? ಹಾಗೇ ಸುಮಾರು ಐವತ್ತು ಲಕ್ಷ ವರ್ಷಗಳಲ್ಲಿ ತೆಥಿಸ್ ಸಾಗರ ಇಲ್ಲವಾಯಿತು. ಅಂದು ಮೇಲೆ ಬಿದ್ದ ಸಾಗರ ಪಾತ್ರೆಯೇ ಇಂದಿನ ಟಿಬೆಟ್. ದೃಢ ನೆಲದಲ್ಲೆದ್ದ ನೆರಿಗೆಗಳೇ ಮಹೋನ್ನತ ಹಿಮಾಲಯ ಸರಣಿ.

### ಹಿಮಪರ್ವತಗಳು

ಫಲಕಗಳ ತಾಕಲಾಟದಲ್ಲಿ ಪರ್ವತ ಎದ್ದದ್ದು ಸರಿ. ಆದರೆ ಹಿಮ ಎಲ್ಲಿಂದ ಬಂತು? ಭೂಮಧ್ಯ ರೇಖೆ ಧ್ರುವಪ್ರದೇಶಗಳಿಗೆ ಹೋಲಿಸಿದರೆ ಸೂರ್ಯನಿಗೆ ಹತ್ತಿರವಿದೆ. ಹಾಗಾಗಿ ಅಲ್ಲಿ ಬಿಸಿ ಹೆಚ್ಚು. ಇದೇ ತಂಪಿನ ಪರಿಣಾಮ ಬೆಟ್ಟಗಳ ಎತ್ತರಕ್ಕೆ ಸರಿದಂತೆಯೂ ಒದಗುತ್ತದೆ. ಭೂಮಿ ವಿವಿಧ ಹಂತಗಳಲ್ಲಿ ಬೆಳೆದಿದೆ. ಆದರಲ್ಲಿ ಮುಖ್ಯವಾದುದು ಹವಾ ಮಾನದ ಅತಿರೇಕಗಳು! ಎಂದೂ ನಿಲ್ಲದ ಮಳೆ ಬಂದಿತ್ತಂತೆ. ಹಾಗೆಯೇ ಜಗತ್ತೇ ಮುಳುಗುವಂತಹ ಹಿಮವೂ ಹಲವು ಸಲ ಸುರಿದಿತ್ತು. ಆಗ ಬಿದ್ದ ಹಿಮಕ್ಕೆ ನೆಲ ಮತ್ತು ವಾತಾವರಣ ಅನುಕೂಲವಾಗಿ ಒದಗಿದಲ್ಲಿ ಉಳಿದುಕೊಂಡವು. ಅವೇ ಇಂದು ಧ್ರುವ ಪ್ರದೇಶಗಳ ಹೊದಿಕೆ, ಹಿಮಾಲಯದ ಟೊಪ್ಪಿ.

### ಸ್ತರಭಂಗ ಪರ್ವತಗಳು

ಕೆಲವೆಡೆಗಳಲ್ಲಿ ಎರಡು ಅಸಮಾನ ಫಲಕಗಳು ತಾಕಲಾಡುತ್ತವೆ. ಅಲ್ಲಿ ಹಗುರವಾದ ಫಲಕ ಮೇಲೆದ್ದು ಬೆಟ್ಟವಾಗುತ್ತದೆ. ಮತ್ತೊಂದು ಕೆಳಕ್ಕೆ ಜಾರಿ ಮ್ಯಾಂಟಲ್‌ನ ಕುದಿಯಲ್ಲಿ ಕರಗಿ ಹೋಗುತ್ತದೆ. ಹೀಗೆ ಮೂಡಿದ ಬೆಟ್ಟಗಳನ್ನು ಸ್ತರಭಂಗ




ಸ್ತರಭಂಗ ಪರ್ವತ

ಪರ್ವತಗಳೆನ್ನುತ್ತಾರೆ. ಇಲ್ಲಿ ಚಿಪ್ಪಿನ ವಿವಿಧ ಸ್ತರಗಳು ತೆರೆದು ಬಿದ್ದಿರುತ್ತವೆ. ಅಮೇರಿಕಾದ ಸಿಯೆರಾ ನೆವಾಡ ಶ್ರೇಣಿ ಸ್ತರಭಂಗ ಪರ್ವತಕ್ಕೆ ಒಳ್ಳೆಯ ಉದಾಹರಣೆ.

## ಕೊರಕಲು ಬೆಟ್ಟಗಳು

ನೆಲ ಬಿಸಿಲಿಗೆ ಗಾರಾಗುತ್ತದೆ. ಚಳಿಗೆ ಬಿರಿಯುತ್ತದೆ. ಎದ್ದ ಪುಡಿಯನ್ನು ಗಾಳಿ ಹಾರಿಸುತ್ತದೆ, ಮಳೆ ತೊಳೆದೊಯ್ಯುತ್ತದೆ. ಇದು ನಿತ್ಯ ನಡೆಯುವ ಸವಕಳಿಯ ಕತೆ. ಒಮ್ಮೆಗೇ ಸೊಕ್ಕುವ ನದಿಗಳು, ಹಿಮಪಾತದ ವಿಶಿಷ್ಟ ಲಕ್ಷಣಗಳೂ ಭಾರೀ ಕೊರೆಯುತ್ತವೆ. ಪ್ರಸ್ಥ ಭೂಮಿಯ ಸ್ತರಗಳ ಮೇಲೆ ಸವಕಳಿಯನ್ನು ಕಲ್ಪಿಸಿಕೊಳ್ಳಿ.

ನೆಲದ ಮಿದುತನ ಬೇಗ ಸವೆಯಲು ಕಾರಣವಾಗುತ್ತದೆ. ಹಾಗೆಯೇ ಗಟ್ಟಿ ಅಂಶಗಳು ಉಳಿದು ನಿಲ್ಲುತ್ತವೆ. ಇವೂ ಸವೆಯುತ್ತವೆ. ಆದರೆ ಸವೆತದ ಪ್ರಮಾಣ ನಿಧಾನ. ಹಾಗೆ ಉಳಿದ ಎತ್ತರಗಳೂ ಬೆಟ್ಟಗುಡ್ಡೆಗಳೇ ಆಗಿರುತ್ತವೆ. ನಮ್ಮ ಕರಾವಳಿಯ ಎಲ್ಲಾ ನದಿ ಪಾತ್ರೆಗಳಲ್ಲೂ ಇದಕ್ಕೆ ಸಣ್ಣ ಪ್ರಮಾಣದ ಉದಾಹರಣೆ ಸಿಕ್ಕುತ್ತದೆ.

ಕೊರಕಲು ಪರ್ವತಗಳಿಗೆ ಅದ್ಭುತ ಉದಾಹರಣೆ ಅಮೇರಿಕಾದ ಕೊಲರೆಡೋ ನದಿ ಪಾತ್ರೆಯಲ್ಲಿದೆ. ಇಲ್ಲಿ ನದಿ ಹಲವು ಲಕ್ಷ ವರ್ಷಗಳಿಂದ ಕೆಲಸ ನಡೆಸಿದೆ. ಮಿಂಚಿನಂಥ ಪ್ರವಾಹಕ್ಕೆ ಇದು ಹೆಸರು ವಾಸಿ. ಇಲ್ಲಿ ಗಾಳಿ, ಮಳೆ, ಬಿಸಿಲಿನ ಸಹಕಾರವೂ ಧಾರಾಳ ಇದೆ. ಹಿಂದಿನ ಪ್ರಸ್ಥಭೂಮಿ ಇಂದು ವಿಸ್ತಾರ ಕಣಿವೆಯಾಗಿದೆ. ಒಂದೂವರೆ ಕಿ.ಮಿ. ವರೆಗೂ ಇಲ್ಲಿ ಆಳ ಅಳೆದಿದ್ದಾರೆ. ಇದಕ್ಕೆ ಹೆಸರೇ ಗ್ರಾಂಡಕಾನ್ಯನ್ ಎಂದು. ಅಂದರೆ ಅರ್ಥ ಅದ್ಭುತ

ಕಣಿವೆ. ಇದರ ನೋಟ ಸ್ತರಭಂಗ ಪರ್ವತಗಳಂತೆ ಇರುತ್ತದೆ. ಭೂಸ್ತರದ ತಿಳುವಳಿಕೆಗೆ ಪ್ರಕೃತಿಯೇ ನೆಲ ಸೀಳಿ ಇಟ್ಟ ಹಾಗಿದೆ.

## ದೊಡ್ಡವರು ಯಾರು ?

ಮನುಷ್ಯನ ಬಳಕೆಗೆ ಸಿಗುವ ಮಿತಿಯಲ್ಲಿ ಗುಡ್ಡಬೆಟ್ಟ ನೋಡಿದೆವು. ಆದರೆ ಸಾಗರಗಳ ಆಳದಲ್ಲೂ ಗುಡ್ಡಬೆಟ್ಟಗಳಿವೆ. ಅಷ್ಟೇ ಏಕೆ, ಭೂಗೋಳದ ಅತಿ ಉದ್ದದ ಬೆಟ್ಟ ಸಾಲಿರುವುದೇ ಇಲ್ಲಿ. ಅತ್ಯಂತ ನಿಜ ಎತ್ತರದ ಬೆಟ್ಟಇರುವುದೇ ಸಾಗರದೊಳಗೆ. ಇದಕ್ಕೆರಡು ಉದಾಹರಣೆ.

೧) ಅಟ್ಲಾಂಟಿಕ ಸಾಗರದ ನಡುವೆ ಹಾಯುವ ಬೆಟ್ಟ ಸಾಲಿನ ಉದ್ದ ಹದಿನಾರು ಸಾವಿರ ಕಿಲೋಮೀಟರ ಹಿಮಾಲಯದ ಉದ್ದ ಎರಡೂವರೆ ಸಾವಿರ ಕಿಲೋಮೀಟರ ಸಾಗರದಲ್ಲಿನ ಬೆಟ್ಟಸಾಲುಗಳಲ್ಲಿ ಹಲವು ಜ್ವಾಲಾಮುಖಿಗಳಿವೆ. ದ್ವೀಪಗಳಾಗಿ ಪ್ರಸಿದ್ಧಿ ಪಡೆದಿರುವ ಐಸ್‌ಲ್ಯಾಂಡ ಮಹಾನ್ ಶಿಖರಗಳೂ ಸೇರಿವೆ. ೨) ಹವಾಯಿ ದ್ವೀಪದ ಬಳಿಯಿರುವ ಮೌಂಟಕಿಯಾ (ಮೌಂಟಕಿಯಾ ಎಂದರೆ ಬಿಳಿಬೆಟ್ಟ ) ಭೂಗೋಳದ ಅತ್ಯಂತ ಎತ್ತರದ ಶಿಖರ. ಇದು ಸಮುದ್ರದೊಳಗೆ ಆರುಸಾವಿರ ಮೀಟರ, ನೀರ ಮೇಲೆ ನಾಲ್ಕುಸಾವಿರ ಮೀಟರ ಎತ್ತರವಿದೆ. ಇದರ ಒಟ್ಟು ಎತ್ತರ ಎವರೆಸ್ಟಗಿಂತ ಒಂದೂವರೆ ಸಾವಿರ ಮೀಟರ್ ಹೆಚ್ಚು.

ಈ ಶ್ರೇಣಿಗಳು, ಶಿಖರಗಳು ನಮ್ಮ ಸಹಜ ಬಳಕೆಗೆ ಒದಗುವುದಿಲ್ಲ. ಹಾಗಾಗಿ ಅವನ್ನು ಅಷ್ಟಾಗಿ ಗಣಿಸುವುದಿಲ್ಲ.

## ಬೆಟ್ಟದ ಅಳತೆ

ಚಾಮುಂಡಿ ಬೆಟ್ಟದ ಎತ್ತರವನ್ನು ಒಂದು ಸಾವಿರ ಮೆಟ್ಟಿಲು, ನೀಲಿಮಲೆಯ ಎತ್ತರವನ್ನು ಇಷ್ಟು ಹೆಜ್ಜೆ ಎಂದೋ ಹೇಳುವುದಿದೆ. ಬೆಟ್ಟದ ಸರಿಯಾದ ಎತ್ತರ ಅಳೆಯಲು ಈ ಅಡಿಕೋಲೇ ತಪ್ಪು. ಏಕೆ ಎಂದು ತಿಳಿಯಲು ಕುದುರೆಮುಖಕ್ಕೆ ಬನ್ನಿ. ಕುದುರೆಮುಖ

ಶಿಖರದ ತಪ್ಪಲಿನ ಒಂದು ಊರು ನಾವೂರು. ಇನ್ನೊಂದು ತಪ್ಪಲಿನ ಊರು ಸಂಸೆ. ಎರಡೂ ಊರಿನವರು ತಮ್ಮ ತಮ್ಮ ನೆಲದಿಂದ ಕುದುರೆಮುಖದ ಎತ್ತರವನ್ನು ಅಳೆದರೆನ್ನಿ. ಎರಡು ಬೇರೆ ಬೇರೆ ಅಳತೆಗಳು ಸಿಗುತ್ತವೆ. ಅಂದರೆ ಆ ನೆಲದ ಭಾಗದಿಂದ ಶಿಖರಕ್ಕೆ ಏರಲು ಉಳಿದ ಎತ್ತರಗಳಾಗಿರುತ್ತವೆ.



ವಿಂಗಡಣೆ ಮತ್ತು ಬೆಟ್ಟದ ಅಳತೆ

ತೋರಿಕೆಯಲ್ಲಿ ಬೆಟ್ಟಗುಡ್ಡಗಳು ಸ್ವತಂತ್ರ. ವಾಸ್ತವದಲ್ಲಿ ಇವು ನೆಲದ ಭಾಗಗಳೇ. ನಾವೂರಿಗೆ ಬೆಟ್ಟದ ಭಾಗವಾಗಿಯೇ ತೋರುವ ಎತ್ತರ ಸಂಸೆಯ ನೆಲವೂ ಹೌದು. ಹಾಗಾಗಿ ಒಟ್ಟು ನೆಲ ಆರಂಭವಾದಲ್ಲಿಂದ ಅಳತೆ ಪ್ರಾರಂಭಿಸಬೇಕು. ನಮ್ಮ ನೆಲ ಸಮುದ್ರದ ಅಂಚಿನಿಂದ ತೊಡಗುತ್ತದೆ. ಸರಾಸರಿ ಸಮುದ್ರ ಮಟ್ಟವನ್ನು ಸೊನ್ನೆ ಎಂದಾರಂಭಿಸುವುದು ಕ್ರಮವಾಗಿದೆ. ಇದೇ ಬೆಟ್ಟಗಳ ಅಳತೆಗೆ ಮೂಲಮಾನ.

ಬ್ರಿಟಿಷರ ಕಾಲದಲ್ಲಿ ಸರ್ವೇಕ್ಷಣೆ ಭಾರತದಲ್ಲಿ ಮೊದಲಬಾರಿಗೆ ವೈಜ್ಞಾನಿಕವಾಗಿ ನಡೆಯಿತು. ಹತ್ತುವುದು ಸಾಧ್ಯವಾದಲ್ಲಿ ವಾಯುಭಾರ ಮಾಪಕಗಳಿಂದ ಅಳೆದರು. ಹತ್ತಲಾಗದ ಎತ್ತರಗಳನ್ನು ದೂರವೀಕ್ಷಣೆ, ಗಣಿತೀಯ ತಂತ್ರಗಳಿಗೆ ಒಡ್ಡಿದರು. ಕರಾರುವಾಕ್ಕು ಅಳತೆಗಳನ್ನು ಭೂಪಟಗಳಲ್ಲಿ ಸೇರಿಸಿದರು. ಬೆಟ್ಟಗುಡ್ಡಗಳ ಲೋಕದಲ್ಲಿ ಭಾರತ ಪ್ರಥಮ ಸ್ಥಾನದಲ್ಲಿರುವುದನ್ನು ಲೋಕಕ್ಕೆ ತಿಳಿಸಿದರು.

## ರಕ್ಷಣಾ ಕೋಟೆಗಳು

ಚೀನಾದೇಶ ರಕ್ಷಣೆಗಾಗಿ ಸಾವಿರಾರು ಕಿಲೋಮೀಟರು ಉದ್ದದ ಕಗ್ಗಲ್ಲ ಗೋಡೆಯನ್ನೇ ಕಟ್ಟಿಕೊಂಡಿತು. ಅದನ್ನಿಂದೂ ನೋಡಬಹುದು. ಆದರೆ ಭಾರತಕ್ಕೆ ಮಾನವ ನಿರ್ಮಿತ ಗೋಡೆಗಿಂತಲೂ ಎತ್ತರದ ಉದ್ದದ ಗೋಡೆಯಾಗಿ ಹಿಮಾಲಯ ಒದಗಿದೆ. ಇದು ಜಗತ್ತಿನ ಬೆಟ್ಟಸಾಲುಗಳಲ್ಲೇ ಎಳೆಯದು. ಅಂದರೆ ಇದು ಇನ್ನೂ ಬೆಳೆಯುತ್ತಿರುವ ಶ್ರೇಣಿ. ಜೊತೆಗೆ ದಟ್ಟವಾದ ಹಿಮದಹೊದಿಕೆ ಎಂಥಾ ವೈರಿಯನ್ನೂ ಸೋಲಿಸಬಲ್ಲುದು.

ಇತಿಹಾಸದಲ್ಲಿ ಹಲವು ಕೋಟೆಗಳು ನಿಂತದ್ದೇ ಬೆಟ್ಟಗಳ ಮೇಲೆ. ಬೆಟ್ಟದ ನೆತ್ತಿಯಿಂದ ವೈರಿ ಬರುವುದನ್ನು ಮುಂದಾಗಿ ತಿಳಿಯಬಹುದು. ಕೆಲವು ಏಕ ಶಿಲಾ ಶಿಖರಗಳಿವೆ. ಅದಕ್ಕೆ ಮನುಷ್ಯ ರಚನೆಗಳನ್ನು ಸೇರಿಸಿ ಕೋಟೆ ಮಾಡಿದ್ದಾರೆ. ಇಂಥವು ಸಣ್ಣ ಸೈನ್ಯಬಲದೊಡನೆ ದೊಡ್ಡ ವಿಜಯ ಸಾಧಿಸಿದ ಹಲವು ಕಥೆಗಳಿವೆ. ಜಮಾಲಾಬಾದ,ದೇವಗಿರಿದುರ್ಗ, ಮಂಜರಾಬಾದ್ ಇವು ಇಂತಹ ಕೆಲವು ಪ್ರಸಿದ್ಧ ಗಿರಿದುರ್ಗಗಳು.

## ಬೆಟ್ಟವೆಂಬ ಮಳೆಕಟ್ಟೆ

ಬೆಟ್ಟಸಾಲು ಪರಿಸರ ಪೋಷಣೆಯನ್ನು ಅದ್ಭುತವಾಗಿ ಮಾಡುತ್ತದೆ. ಮೊದಲಿಗೆ ಗಾಳಿ ಮಳೆಯ ಸಂಬಂಧ ತಿಳಿಸುತ್ತೇನೆ. ಒಣ ಭೂಮಿ ಬಿಸಿಲು ಚಳಿಗಳಿಗೆ ಜಡವಾಗಿರುತ್ತದೆ. ನೆಲದ ಮೇಲೆ ಬಿದ್ದ ಬಿಸಿಲು ಗಾಳಿಯನ್ನು ಬಿಸಿ ಮಾಡುತ್ತದೆ. ಇದೇ ಬಿಸಿಲು ನೀರ ಮೇಲೆ ಬಿದ್ದಾಗ ನೀರು ಶಾಖ ಹೀರಿಕೊಳ್ಳುತ್ತದೆ. ನೀರ ಮೇಲಿನ ಗಾಳಿ ಅಷ್ಟಾಗಿ ಬಿಸಿ ಇರುವುದಿಲ್ಲ. ಹೀಗಾಗಿ ಹಗಲಿನಲ್ಲಿ ನೆಲದ ಬಿಸಿಗಾಳಿ ಮೇಲೇರುತ್ತದೆ. ಸಾಗರಗಳ ತಂಪುಗಾಳಿ ಖಾಲಿ ಜಾಗ ತುಂಬಲು ನೆಲಕ್ಕೆ ಧಾವಿಸುತ್ತದೆ. ರಾತ್ರಿಯಲ್ಲಿ ಇದು ತಿರುಗಾ ಮುರುಗಾ ಆಗುತ್ತದೆ. ನೆಲ ತಣ್ಣಗುಳಿದಿದೆ. ಆದರೆ ಸಮುದ್ರದ ಬಿಸಿ ಅಲ್ಲಿನ ಗಾಳಿಯನ್ನು ಮೇಲಕ್ಕಟ್ಟುತ್ತದೆ. ಭೂಗಾಳಿ ಸಮುದ್ರದ ಮೇಲಿನ ಖಾಲಿಜಾಗಕ್ಕೆ ನುಗ್ಗುತ್ತದೆ.

ಬಿಸಿ ಏರುವ ತಣಿಯುವ ಕ್ರಿಯೆ ಪರ್ವತ ವಲಯಗಳಲ್ಲಿ ಹೆಚ್ಚು. ಇದನ್ನು ತಿಳಿಯಲು ಈ ಒಂದು ಪ್ರಯೋಗ ಮಾಡಿ. ಕಾಗೆ ಹಾರಿದ ಒಂದು ದೂರವನ್ನು ಮಟ್ಟ ನೆಲದಲ್ಲಿ ಗುರುತಿಸಿ. ಮತ್ತೆ ಅದನ್ನೇ ಪರ್ವತ ಪ್ರದೇಶದಲ್ಲೂ ಗುರುತಿಸಿ. ಈಗ ನೆಲದಲ್ಲೇ ಈ ದೂರವನ್ನು ಅಳೆಯಿರಿ. ಸಹಜವಾಗಿ ತಿಳಿಯುತ್ತದೆ.

ಸಮುದ್ರದ ಮೇಲೆ ಹಾಯ್ದು ಬರುವ ಗಾಳಿಯಲ್ಲಿ ನೀರಪಸೆ ಇರುತ್ತದೆ. ಗಾಳಿ ಬೆಟ್ಟಸಾಲಿಗೆ ಬಡಿದು ಮೇಲೇರುತ್ತದೆ. ಅದು ಎತ್ತರ ಪಡೆದಂತೆಲ್ಲ ತಣಿಯುತ್ತಾ ಹೋಗುತ್ತದೆ. ನೀರಪಸೆ ಮೋಡವಾಗುತ್ತದೆ, ಮಳೆಯಾಗಿ ಬೀಳಲೂಬಹುದು. ಬೆಟ್ಟ ಮಳೆಯ ಸಂಬಂಧ ದೊಡ್ಡದು. ಅದರ ಹೆಚ್ಚಿನ ವಿವರಕ್ಕೆ ನಮ್ಮ ಪಶ್ಚಿಮ ಘಟ್ಟಗಳನ್ನೇ ನೋಡೋಣ.

## ಪಶ್ಚಿಮ ಘಟ್ಟ

ಸೂರ್ಯಚಲನೆಯ ಆಧಾರದಲ್ಲಿ ನಮ್ಮ ಋತುಮಾನಗಳು ಬದಲಾಗುತ್ತವೆ. ಬದಲಾದಂತೆ 'ಮಾನ್ಸೂನ್' ಬರುತ್ತದೆ. ಮಾನ್ಸೂನು ಒಂದು ದೊಡ್ಡ ಗಾಳಿಯ ಪ್ರವಾಹ. ಹಿಂದೆ ಅರಬ್ಬರು ಕಡಲಯಾನ ಮಾಡುತ್ತಿದ್ದ ವ್ಯಾಪಾರಿಗಳು, ದೇಶ ತಿರುಗಲು ಮಾನ್ಸೂನು



ಕಾಯುತ್ತಿದ್ದರು. ಅರಬೀ ಭಾಷೆಯಲ್ಲಿ ಮಾನ್ಸೂನು ಎಂದರೆ ಯಾನಕ್ಕೆ ಸಕಾಲ ಎಂದು ಅರ್ಥ.

ಮಾನ್ಸೂನು ಆಫ್ರಿಕಾದ ಮರುಭೂಮಿಗಳಲ್ಲಿ ಹುಟ್ಟುತ್ತದೆ. ಸಾಗರಗಳ ಮೇಲೆ ಹಾಯ್ದು ಬರುವಾಗ ಭಾರೀ ತೇವಾಂಶ ಸಂಗ್ರಹಿಸುತ್ತದೆ. ಮಾನ್ಸೂನನ್ನು ಕಡೆದು ಮಳೆಯಾಗಿಸುವ ಕಡೆಗೋಲು ಪಶ್ಚಿಮ ಘಟ್ಟಗಳು. ಜೊತೆಗೆ ಘಟ್ಟಗಳು ಗಾಳಿಯ ಬಿರುಸನ್ನು ಕುಗ್ಗಿಸುತ್ತವೆ. ಬೆಟ್ಟ ಕಣಿವೆಗಳ ಸಂದಿನಲ್ಲಿ ಗಾಳಿಯನ್ನು ಹರಿಹಂಚಿ ಒಳನಾಡಿಗೆ ರಕ್ಷಣೆ ಕೊಡುತ್ತದೆ. ಈ ಎತ್ತರದ ಪರ್ವತ ಶ್ರೇಣಿ ಪೂರ್ವ ಕರಾವಳಿಯಲ್ಲಿ ಇಲ್ಲ. ಹಾಗಾಗಿ ಅಲ್ಲಿ ವರ್ಷದಲ್ಲಿ ಹಲವು ಬಾರಿ ಬಿರುಗಾಳಿ ಮಳೆ ತಪ್ಪಿದ್ದಿಲ್ಲ.

## ಆರೋಗ್ಯಧಾಮ

ಜಗತ್ತನ್ನು ವಿಂಗಡಿಸಿದ ಕ್ರಮದಲ್ಲಿ ದಕ್ಷಿಣ ಭಾರತ ಉಷ್ಣವಲಯದಲ್ಲಿದೆ. ಒಣಹವೆ, ಎಲೆ ಉದುರಿಸುವ ವರ್ಗದ ಕಾಡು ಇಲ್ಲಿಗೆ ಸಹಜವಾಗಿರಬೇಕಿತ್ತು. ಆದರೆ ಪಶ್ಚಿಮ ಘಟ್ಟಗಳ ಕೃಪೆ ಬೇರೇ ಮಾಡಿದೆ. ವಿಶೇಷ ಮಳೆ, ತಂಪು, ನಿತ್ಯ ಹಸುರಿನ ಕಾಡು ಇಲ್ಲಿದೆ. ಬೆಟ್ಟಗಾಡಿನ ಹವಾಮಾನ ಮನುಷ್ಯ ವಾಸಕ್ಕೆ ಅನುಕೂಲವಾಗಿಲ್ಲ. ಮನುಷ್ಯವಾಸ ಎಂದರೆ ಪರಿಸರ ವಿರೋಧ ಇದ್ದದ್ದೇ. ಸಹಜವಾಗಿ ಘಟ್ಟಗಳಲ್ಲಿ ಆರೋಗ್ಯಕರ ಪರಿಸರವಿದೆ. ಅಲ್ಲಿ ತೇವ ಕಳೆದುಕೊಂಡ ಗಾಳಿ ಶುದ್ಧವಾಗಿರುತ್ತದೆ. ಝರಿ ತೊರೆಗಳ ನೀರು ನಿರ್ಮಲ. ಅಲ್ಲಿನ ಪ್ರತಿ ಹಸುರು ವನಸ್ಪತಿ.

## ನೆಲದ ಫಲವಂತಿಕೆ

ಸಮಭೂಮಿಯಲ್ಲಿ ಫಲವಂತಿಕೆ ಒಂದೇ ರೂಪದಲ್ಲಿರುತ್ತದೆ. ಅಲ್ಲಿನ ಸಹಜ ಕಾಡಿನಲ್ಲಿ ವೈವಿಧ್ಯ ಕಡಿಮೆ. ಬೆಟ್ಟಗಳಲ್ಲಿ ಹಾಗಲ್ಲ. ಬಯಲಿಗಿಂತ ಬೆಟ್ಟದಲ್ಲಿ ಸವಕಳಿ ಹೆಚ್ಚಾಗಿರುತ್ತದೆ. ಮತ್ತಿತರ ಹುಟ್ಟಿನಲ್ಲೂ ನೆಲದ ಗುಣ ಏರುಪೇರಾಗಿರುತ್ತದೆ. ಹಾಗಾಗಿ ಒಂದೇ ನೆಲದಲ್ಲಿ ಹಲವು ಗುಣಗಳನ್ನು ಗುರುತಿಸಬಹುದು. ಉದಾಹರಣೆಯಾಗಿ ಕುಮಾರ ಪರ್ವತದ ಶಿಖರಕ್ಕೆ ಬನ್ನಿ.

ಕುಮಾರ ಪರ್ವತದ್ದು ಏಕಶಿಲಾಶಿಖರವಲಯ. ಈ ಮಹಾ ಬಂಡೆಗುಂಡನ್ನು ಅಲ್ಲಲ್ಲಿ ಮಣ್ಣಿನ ಹೊದಿಕೆ ಮರೆಸುತ್ತದೆ. ಈಗ ಮಳೆಗಾಲದ ಕೊನೆ ಅಂದುಕೊಳ್ಳಿ. ಶಿಖರದ ಒಂದು ಬದಿ ನೇರ ಪ್ರಪಾತ. ಅದರ ಅಂಚಿನಲ್ಲಿ ಪುಡಿಕಲ್ಲು ಮರಳಿನಲ್ಲೇ ಬಿಗಿಯಾಗಿ ಬೇರು ಹೆಣೆದ ಮುಳ್ಳು ಪೊದರುಗಳಿವೆ. ಇನ್ನು ಎದುರು ದಿಕ್ಕಿನ ಇಳಿಜಾಡಿಗೆ ಬನ್ನಿ. ನೂರಿನ್ನೂರು ಮೀಟರ ಉದ್ದಕ್ಕೆ ಜವುಗು ಪ್ರದೇಶ. ಕೆಸರು ನೆಲದಲ್ಲಿ ದಪ್ಪ ದಪ್ಪ ಹುಲ್ಲಿನ ಗೆಡ್ಡೆಗಳು. ಅನಂತರ ಗಿಡ್ಡಮರಗಳ ಕಾಡು. ಮರಗಳಿಗೆ ಸಾಕಷ್ಟು ಪ್ರಾಯ ಆಗಿದೆ. ಆದರೆ ಅಲ್ಲಿನ ಹವೆಗೆ ಸರಿಯಾಗಿ ಗಿಡ್ಡವಾಗಿ ಗಂಟುಗಂಟಾಗಿ ಬೆಳೆದಿವೆ. ಎಲ್ಲ ರೆಂಬೆಕೊಂಬೆಗಳ ಕೈ ಬೆಸೆದಿವೆ. ದಟ್ಟ ಚಪ್ಪರ ಕಟ್ಟಿ ನಿಂತಿವೆ. ಇವು ವರ್ಷದಲ್ಲಿ ಒಮ್ಮೆ ಬಿಳಿ ಹೂವು ಬಿಡುವುದುಂಟು. ಆಗ ಬೆಟ್ಟದ ಬಣ್ಣವೇ ಬದಲಾಗುತ್ತದೆ. ಅದನ್ನು ನೋಡಿಯೇ ಕೊಡಗಿನ ಜನ 'ಪುಷ್ಪಗಿರಿ' ಎಂದಿರಬಹುದು. ಈ ನೋಟ ದಕ್ಷಿಣ ಕನ್ನಡ ಜಿಲ್ಲೆಯ ಮಗ್ಗುಲಿಗಿಲ್ಲ. ಅವರು ತಮ್ಮ ಬದಿಯ ಸುಬ್ರಹ್ಮಣ್ಯನನ್ನೇ ನೆನೆದರು. ಕುಮಾರ ಪರ್ವತ ಎಂದೇ ಹೆಸರಿಸಿದರು.

ಪುಷ್ಪವನ ಕಳೆದದ್ದೆ ಬಂಡೆ ಪೂರ್ಣವಾಗಿ ಪ್ರಕಟವಾಗುತ್ತದೆ. ಅದು ಕಡಿದಾಗಿಯೂ ಇದೆ. ಅದರ ಉದ್ದಗಲದಲ್ಲಿ ನೀರಿನ ಬೇರೆ ಬೇರೆ ರೂಪಗಳಿವೆ . ಜಿನುಗು ಒಂದೆಡೆ, ತೊರೆ ಮತ್ತೊಂದೆಡೆ, ಪುಟ್ಟ ಜಲಪಾತವೇ ಮಗುದೊಂದೆಡೆ. ಬಂಡೆಹಾಸು, ಅಂಚುಗಳ ಪುಡಿಕಲ್ಲು, ಮರಳು ಸದಾ ನೀರಿನಲ್ಲಿ ನೆನೆದಿರುತ್ತದೆ. ಇವೆಲ್ಲರಲ್ಲೂ ನೆಲದ ಬಣ್ಣ ಮರೆಸುವಂತೆ ಜಲಸಸ್ಯಗಳು ಹಬ್ಬಿರುತ್ತವೆ. ನೀಲಿ ಗುಲಾಬಿ ಬಣ್ಣದ ಹೂ ಅರಳಿ ಶೋಭಿಸುತ್ತದೆ.

ಮುಂದಿನ ಋತುಮಾನಗಳಲ್ಲಿ ಮಳೆ ಇಲ್ಲ. ನೀರ ಒಸರು ಕ್ರಮವಾಗಿ ಬತ್ತುತ್ತದೆ. ಜಲಸಸ್ಯಗಳು ಅಳಿಸಿಯೇ ಹೋದವೋ ಅನ್ನಿಸುತ್ತದೆ. ಇಲ್ಲ, ಅವು ತಮ್ಮ ಬೇರಿನ ಮೂಲದಲ್ಲಿ ಅಡಗಿವೆ. ಇನ್ನೊಂದೇ ಮಳೆಗಾಲವನ್ನೂ ಕಾದಿವೆ. ಹಸಿರು ಹಾವಸೆಗಳು ಕಪ್ಪಾಗಿ ಧೂಳಾಗುತ್ತವೆ. ಕಲ್ಲಹೂಗಳ ಬಿಳಿ ಅರಳಿನಲ್ಲಿ ಇನ್ನೊಂದೇ ಜನ್ಮ ಪಡೆಯುತ್ತವೆ. ಹುಲ್ಲು ಹಣ್ಣಾಗಿ, ಒಣಗಿ ಬೆಂಕಿ ಬೀಳುತ್ತದೆ. ಗೊಸರಗದ್ದೆ ಸುಟ್ಟಕರಿಗೆಡ್ಡೆಗಳ ಮಸಣ.

## ಪಶುಪಕ್ಷಿಗಳು

ಬೆಟ್ಟಗುಡ್ಡಗಳಲ್ಲಿನ ಪಶುಪಕ್ಷಿ ಲೋಕ ಸಾಕಷ್ಟು ದೊಡ್ಡದಿದೆ. ಬಂಡೆಗಳ ಎತ್ತರದಲ್ಲಿ ಹೆಜ್ಜೇನು ಹಿಂಡು. ಕೋಡುಗಲ್ಲ ಸಂದಿನಲ್ಲಿ ಗಿಡುಗಗಳ ಗೂಡು. ಜೇನು ನೊಣ ತಿನ್ನುವ ಹಕ್ಕಿಗಳ ಹಾಡು. ಹುಲ್ಲ ಮಿಡತೆಗಳ ಬೆನ್ನುಬಿದ್ದ ಪಕ್ಷಿ ಕಸರತ್ತು. ಕಾಟಿಕಡವೆಗಳು ಹುಲ್ಲುಗಾವಲಿನ ಖಾಯಂ ಗಿರಾಕಿಗಳು. ಇವು ರಕ್ಷಣೆಗೆ ಕಾಡು ಸೇರುತ್ತವೆ. ಆಡಿನ ಜಾತಿಯ ಸಸ್ಯಾಹಾರಿಗಳು ಬೆಟ್ಟದ ಅಪ್ಪಟ ಪ್ರಜೆಗಳು. ಹಿಮಾಲಯದ ಬೆಟ್ಟದಾಡು, ನೀಲಗಿರಿಯ ತಾರ್ ಕೆಲವು ಉದಾಹರಣೆಗಳು. ಇವು ಪ್ರಪಾತದ ಅಂಚುಗಳಲ್ಲೂ ಆರಾಮವಾಗಿರುತ್ತವೆ, ಮೇವು ರಕ್ಷಣೆ ಪಡೆಯುತ್ತವೆ.

ಸಸ್ಯಹಾರಿಗಳ ಹಿಂದೆಯೇ ಮಾಂಸಹಾರಿ ಇದೆ. ಬೆಟ್ಟಗಳಲ್ಲಿನ ಗವಿಗಳಲ್ಲಿ ಹುಲಿ ತೋಳಗಳ ವಾಸ. ಬೆಟ್ಟದ ಮೇಲೆ ಚಿರತೆಗಳ ಓಡಾಟವಂತೂ ಮಾಮೂಲು. ಅದರಲ್ಲೂ ಹಿಮಚಿರತೆಗಳ ಜೀವನಕತೆ ಬಲು ರೋಮಾಂಚನಕಾರಿ. ಆದರೆ ಅವು ಅಳಿವಿನ ಅಂಚಿನಲ್ಲಿವೆ.

ಇದೇ ರೀತಿಯಲ್ಲಿ ಆಫ್ರಿಕಾದ ಮಂಜು ಮುಸುಕಿದ ಪರ್ವತಗಳಲ್ಲಿನ ಗೊರಿಲ್ಲಾಗಳು ಅಪಾಯದಲ್ಲಿವೆ. ಚೀನಾದ ಪಾಂಡಾಕರಡಿಗಳೂ ಅಳಿವಿನ ಅಂಚಿನಲ್ಲಿ ಇರುವ ಬೆಟ್ಟದ ಜೀವಿಗಳು.

ಪರ್ವತ ಶ್ರೇಣಿಗಳ ಮೇಲಿನ ಜಾಡುಗಳು, ಪ್ರಾಣಿಗಳ ಓಡಾಟಗಳಿಂದ ಆಗುತ್ತವೆ. ಪ್ರಾಣಿಗಳಿಗೆ ಹುಲ್ಲು, ನೀರಲ್ಲದೆ ಉಪ್ಪು ಬೇಕು. ಇವು ಮಣ್ಣಿನಲ್ಲಿ ಉಪ್ಪಿನ ಅಂಶದ ಜಾಗ ಗುರುತಿಸುತ್ತವೆ. ಅಲ್ಲಿ ಕೆದರಿ ನೆಲ ನೆಕ್ಕುತ್ತವೆ. ಕಾಟಿಗಳು ಕೆಸರಾಡಿದ ಜವುಗು ನೋಡಬಹುದು. ಇವೇ ಮೈ ತುರಿಸಿದ ಮರ, ನೆತ್ತಿ ಉಜ್ಜಿದ ಧರೆಯೂ ಧಾರಾಳ ಸಿಗುತ್ತವೆ. ಬೆಟ್ಟದ ಮೇಲಿನ ಬೆಟ್ಟಗಳಿಗೆ ಆನೆಗಳು ಜಾಡು ಮಾಡುತ್ತವೆ. ಅವು ಹುಲ್ಲಿನ ರುಚಿಗೆ ಬೆಟ್ಟ ಏರುವುದುಂಟು. ಆಗ ಓರೆ ಜಾಡು ಹುಡುಕುತ್ತವೆ. ಇಳಿಯುವಲ್ಲಿ ಇವುಗಳ ದಾರಿ ನೇರ. ಕೆಳಕಣಿವೆ ಸೇರುವ ನೇರ ಮಣ್ಣಿನ ಕಣಿವೆ ಆರಿಸುತ್ತವೆ. ಅಲ್ಲಿ ಹಿಂಗಾಲು ಚಾಚಿ, ಅಂಡೂರಿ ಕುಳಿತು ಜಾರುತ್ತವೆ. ಎತ್ತಿದ ಮುಂಗಾಲು, ತೊನೆಯುವ ಸೊಂಡಿಲು

ಸಮತೋಲನ ಕಾಪಾಡುತ್ತವೆ.

ಬಿಸಿಲ ಕಾಲದಲ್ಲಿ ಬೆಟ್ಟಗಳಲ್ಲಿ ಮೇವು ಕಡಿಮೆಯಾಗುತ್ತದೆ. ಪ್ರಾಣಿ ಸರಣಿ ತಪ್ಪಲಿಗಿಳಿಯುತ್ತದೆ. ಹುಲ್ಲು ಹಣ್ಣಾಗಿ ಒಣಗಿದಾಗ ಬೆಂಕಿ ಬೀಳುತ್ತದೆ. ಆಗಂತೂ ಪ್ರಾಣಿಗಳ ಕಡ್ಡಾಯ ವಲಸೆ ನಡೆಯುತ್ತದೆ. ಇದು ಕೃಷಿಕರೊಂದಿಗೆ ಪ್ರಾಣಿಗಳ ಹೋರಾಟದ ಕಾಲ. ಬೆಟ್ಟ ಜೀವಿಗಳ ನೋವು ನಲಿವು ಹೀಗೆ ನೂರು, ಸಾವಿರ.

## ಜನಜೀವನ

ಹಿಂದೆಲ್ಲ ಬೆಟ್ಟಗಳನ್ನು ಮನುಷ್ಯ ಬಳಸುತ್ತಿದ್ದುದು ತುಂಬಾ ಕಡಿಮೆಯಿತ್ತು. ಆದಿ ಮಾನವನು ರಕ್ಷಣೆಗೆ ಬೆಟ್ಟದ ಗವಿ ಸೇರಿದ್ದನಂತೆ. ಆದರೆ ನಾಗರಿಕತೆ ಬಯಲಿಗಿಳಿಯಿತು. ಬಲು ಸಣ್ಣವರ್ಗ ಮಾತ್ರ ಬೆಟ್ಟಕ್ಕೇ ಅಂಟಿಕೊಂಡಿತು. ಇವರು ಹೆಚ್ಚು ಕಡಿಮೆ ಅಲೆಮಾರಿಗಳು. ಬೇಟೆ, ವನೋತ್ಪತ್ತಿ, ಸೀಮಿತ ಕೃಷಿಯೊಡನೆ ಬದುಕಿರುವ ಗಿರಿಜನರು.

## ದಾರಿ

ಹಿಂದೆ ಹಿಮಾಲಯ ದಾಟಲು ಕೆಲವೇ ಕಣಿವೆ ಜಾಡುಗಳಿದ್ದವು. ಪಶ್ಚಿಮ ಘಟ್ಟ ಹಾಯಲೂ ಜಾಡುಗಳಿವೆ. ಇವು ಘಾಟಿಗಳೆಂದೇ ಪ್ರಸಿದ್ಧ. ಹುಲಿಕಲ್, ಯಳನೀರು ಇತ್ಯಾದಿ. ಆದರೆ ಇಂದು ಜಾಡುಗಳು ಮಾರ್ಗಗಳೇ ಆಗಿವೆ. ಹೊಸ ಹೆದ್ದಾರಿಗಳೇ ಬೆಟ್ಟದಲ್ಲಿ ಮೈ ಚಾಚಿವೆ. ರೈಲ್ವೇ ಮಾರ್ಗಗಳು, ತೊಟ್ಟಿಲ ಸರಣಿಗಳೂ ಬೆಟ್ಟಗಳಲ್ಲಿ ಧಾರಾಳ ಇವೆ. ಬೆಟ್ಟ ಪಳಗಿಸುವ ಕೆಲಸ ಹೀಗೇ ಹಲವು ಮುಖಗಳಲ್ಲಿ ನಡೆದಿವೆ.

## ಕೃಷಿ

ಬಯಲು ಜನ ಹಿಂದೆ ವನೋತ್ಪತ್ತಿಗಳಿಗೆ ಗಿರಿಜನರನ್ನು ಕಾಯುತ್ತಿದ್ದರು. ಇಂದು ಬೆಟ್ಟದಲ್ಲೇ ಕೃಷಿ ಕ್ರಮಗಳು ಹಬ್ಬುತ್ತಿವೆ. ಅವಶ್ಯ ವನಸ್ಪತಿಗಳ ಏಕಬೆಳೆ ನಡೆಯುತ್ತಿದೆ.

ಉಪಯೋಗ ಸ್ಪಷ್ಟವಿಲ್ಲದ ಇತರ ಸಸ್ಯಗಳು ನಾಶವಾಗುತ್ತಿವೆ. ಕಾಡು ತೆಳುವಾಗಿ ಏಲಕ್ಕಿ ಹರಡಿತು. ಮತ್ತೂ ತೆಳುವಾಗಿ ಕಾಫಿ, ಕರಿಮೆಣಸು ಬಂತು. ಬೆಟ್ಟ ಬೋಳಾಗಿ ಚಹಾ ತೋಟಗಳು ಹರಡಿದವು. ಏಲಕ್ಕಿ ಒಣಗಿಸಲು ಕಾಡು ಸುಟ್ಟರು. ದೇವದಾರು ಮರಗಳು ಚಹಾ ಪೆಟ್ಟಿಗೆಗಳಾದವು. ಬೆಟ್ಟ ಬೀಳುಭೂಮಿ ಆಗುವ ದಿನ ದೂರವಿಲ್ಲ.

## ಅಣೆಕಟ್ಟು

ಬಯಲಿನ ನೀರಾವರಿಗೆ ಬೆಟ್ಟ ಮೂಲ. ಆದುದರಿಂದ ನೀರಾವರಿ ಮತ್ತು ವಿದ್ಯುತ್ ಯೋಜನೆಗಳು ಬೆಟ್ಟಗಳನ್ನೇ ಏರುತ್ತಿವೆ. ವಾರಾಹಿ ಉದಾಹರಣೆಯನ್ನೇ ನೋಡಿ. ಈ ಯೋಜನೆಯ ಅಣೆಕಟ್ಟುಗಳು ಹಲವು ಗುಡ್ಡ, ಕಾಡು ಮುಳುಗಿಸಿತು. ಮುಖ್ಯ ಬೆಟ್ಟ ಒಂದರ ಹೊಟ್ಟೆ ಟೊಳ್ಳುಮಾಡಿದರು. ಇಂದು ಅದರಲ್ಲಿನ ಯಂತ್ರ, ವಿದ್ಯುತ್ ಕೊಡುತ್ತದೆ. ಸ್ವಭಾವತಃ ದುರ್ಬಲ ರಚನೆಯ ಹಿಮಾಲಯವೂ ಇಂಥವನ್ನು ಅನುಭವಿಸುತ್ತಿದೆ. ಉದಾಹರಣೆಗೆ ಟೆಹ್ರಿ ಅಣೆಕಟ್ಟು.

## ಗಣಿಗಾರಿಕೆ

ಬೆಟ್ಟಗಳು ಖನಿಜಗಳ ತವರು. ಹಲವು ವಿಧದ ಗಣಿಗಾರಿಕೆ ಇಲ್ಲಿ ನಡೆಯುತ್ತಿದೆ. ಹಿಂದೆ ಬರಿಯ ಕಲ್ಲುಕುಟಿಗರ ಚಾಣದ ಸದ್ದಷ್ಟೇ ಕೇಳುತ್ತಿತ್ತು. ಅದೂ ಎಲ್ಲೋ ಮೂಲೆಯಲ್ಲಿ ಮಾತ್ರ. ಇಂದು ಯಂತ್ರ ತಂತ್ರಗಳು ಹೊಸದಾಗಿವೆ. ಕಬ್ಬಿಣ, ಕಲ್ಲಿದ್ದಲು, ತಾಮ್ರ, ಟಿನ್, ಯುರೇನಿಯಂ, ಲವಣ, ಚಿನ್ನ, ಬೆಳ್ಳಿ, ವಿವಿಧ ಹರಳುಗಳೆಲ್ಲ ಬೆಟ್ಟಗಳಲ್ಲಿವೆ. ಮನುಷ್ಯನಿಗೆ ಇವುಗಳ ಅಗತ್ಯ ಇದೆ. ಆದರೆ ಸಂಗ್ರಹಿಸುವಲ್ಲಿ ವಿವೇಚನೆ ಬೇಕು. ಎರಡು ವಿಪರೀತ ಉದಾಹರಣೆ ನೋಡಿ :

೧)ಸೋಮೇಶ್ವರದ ಬಂಡೆ ಕಡಲ ಕೊರೆತಕ್ಕೆ ತಡೆ. ಬಂಡೆಯ ಬುಡದವರೆಗೂ ಒಳ್ಳೆಯ ದಾರಿ ಇದೆ. ಪಕ್ಕದಲ್ಲೇ ಬೆಳೆಯುತ್ತಿರುವ ನಗರ ಮಂಗಳೂರು ಇದೆ. ಜಲ್ಲಿ ಸಂಗ್ರಹಿಸುವವರ ಕಣ್ಣು ಸೋಮೇಶ್ವರದ ಮೇಲೆ ಬಿತ್ತು. ಸಾಗಣೆಯ ಸಣ್ಣ ಉಳಿತಾಯಕ್ಕಾಗಿ ಅಲ್ಲಿನ ಬಂಡೆ ಹುಡಿಯಾಗುತ್ತಿದೆ.

೨ )ಕಬ್ಬಿಣದ ಆದುರಿಗಾಗಿ ಕುದುರೆಮುಖ ಗಣಿಯೋಜನೆ ಬಂತು. ದಾರಿ, ವಿದ್ಯುತ್ತು ಸರಿಗೆಗಳಿಗಾಗಿ ಕಾಡು ಹೋಯ್ತು. ಕಲ್ಲ ಪುಡಿ ಒಯ್ಯುವ ನಳಿಗೆ ಸಾಲಿಗಾಗಿ ಗುಡ್ಡಸಾಲನ್ನೇ ಸೀಳಿದರು. ಹೂಳು ಎಸೆಯಲು ಕಣಿವೆ ಮೀಸಲಿಟ್ಟರು. ಶಬ್ದ, ಸಂಚಾರಗಳು ಪ್ರಾಣಿ ಪಕ್ಷಿಗಳನ್ನು ಅಟ್ಟಿತು. ಉಳಿದ ಹುಲ್ಲು ಅಲಂಕಾರದ ವನಗಳಲ್ಲಿ ಮರೆಯಾಯ್ತು; ಕಾಡು ಪ್ರಯೋಗ ಶಾಲೆಗಳಾಗಿ ಬೀಳಾಗುತ್ತಿವೆ. ಇನ್ನು ನದೀ ಪಾತ್ರೆಯ ಗೊಂದಲಗಳು ಪೂರ್ವ ಸಮುದ್ರದವರೆಗೂ ಹರಡಿವೆ.

## ರಕ್ಷಣೆಯ ಕರೆ

ಬೆಟ್ಟಗಳ ಕವಚ ಹರಿದಿದೆ. ನೀರ ಹರಿವನ್ನು ಬೇಕಾಬಿಟ್ಟಿ ನಿಯಂತ್ರಿಸಿದ್ದೇವೆ. ಗೊತ್ತಿದ್ದೂ, ಇಲ್ಲದೆಯೂ ನದಿಗಳಲ್ಲಿ ಹೂಳು ಹೆಚ್ಚಿದೆ. ಇಂದು ಬೆಟ್ಟಗಳ ಸವಕಳಿಯ ದೊಡ್ಡಕಾರಣವೇ ನಾಗರೀಕತೆ. ಅರಿತ ಬುದ್ಧಿವಂತ ಜನ ಒಟ್ಟಾದರು. ಪರಿಸರದ ಹೆಸರಿನಲ್ಲಿ ದೇವದಾರು ಅಪ್ಪಿಕೊಂಡರು. ಟೆಹ್ರಿ ಅಣೆಕಟ್ಟನ್ನು ವಿರೋಧಿಸಿದರು. ಪಶ್ಚಿಮ ಘಟ್ಟಗಳಿಗಾಗಿ ಬೊಬ್ಬೆ ಹಾಕಿದರು. ಸರಕಾರವೂ ಅಭಯಾರಣ್ಯಗಳನ್ನು ಪೋಷಿಸುತ್ತಿದೆ. ನೆಡು ತೋಪುಗಳ ಅಂಗಿ ಬೆಟ್ಟಕ್ಕೆ ಬರಲಿದೆ. ಆದರೂ ಸಾಲದು. ಇನ್ನೂ ಕಡಿಯುವ ಕೈ ಕಬಂಧನದು. ತಡೆಯುವ ಕೈ ಶ್ರೀರಾಮನದ್ದು ಆಗಿಲ್ಲ.

## ದಾರಿತಪ್ಪಿದೆ

ಪೂರ್ವಿಕರು ಪ್ರಕೃತಿಯನ್ನು ಪೂಜಿಸಿದರು. ಕಾಡಿನೊಳಗೆ ಹೋದಂತೇ ಬೆಟ್ಟದ ತುದಿಯಲ್ಲೂ ಗುಡಿ ಕಟ್ಟಿದರು. ಗುಡಿ ಏರುದಾರಿಯ ಕೊನೆ. ಹೋಗಿ ಬರುವ ನಡಿಗೆಯೇ ಪೂಜೆ. ಆದರೆ ಮುಂದುವರಿದಂತೆ ಮುಗ್ಧ ಜನ ಗೊಂದಲ ಮಾಡಿಕೊಂಡರು. ಗುಡಿ ಮುಖ್ಯವಾಗಿ ದಾರಿ ಮರೆತು ಹೋಯ್ತು. ಇಂದು ಬೆಟ್ಟದ ನೆತ್ತಿಯ ತೀರ್ಥಕ್ಷೇತ್ರ ಸುಲಭ ಸಾಧ್ಯವಾಗಿದೆ. ವೆಂಕಟರಮಣನ ಪಾದಾರವಿಂದಕ್ಕೆ ಬಸ್ಸುಗಳು "ಗೋವಿಂದಾ" ಹಾಕುತ್ತವೆ. ಪಳನಿಯಪ್ಪನನ್ನು ವಿದ್ಯುತ್ ತೊಟ್ಟಿಲುಗಳು ತೋರಿಸುತ್ತವೆ. ಕೇದಾರ ಯಮುನೋತ್ರಿಗಳಲ್ಲಿ

ಡೋಲಿ ಕುದುರೆಗಳುಂಟು. ಆದರೆ ಹಿಂದಿನ ಪದ್ಧತಿಗಳನ್ನು ಒಮ್ಮೆ ತಿರುಗಿ ನೋಡುವುದು ಇಂದಿನ ಅವಶ್ಯಕತೆಯಾಗಿದೆ ಎನಿಸುತ್ತದೆ.

## ಪರ್ವತಾರೋಹಣ

ಶ್ರೀ ಕೃಷ್ಣ ಹೇಳಿದಂತೆ ಗೋವರ್ಧನಗಿರಿಯನ್ನು ಪೂಜಿಸಬೇಕು. ಜಪಾನಿಯರು ಅಗ್ನಿ ಪರ್ವತ ಫ್ಯೂಜಿಯಾಮಾವನ್ನು ಪೂಜಿಸುತ್ತಾರೆ. ಏಕೆಂದರೆ ಅದರಿಂದ ಅವರ ನೆಲದ ಫಲವಂತಿಕೆ ಹೆಚ್ಚಿದೆ. ಹೀಗೆ ಕಾರ್ಯವೂ ಕಾರಣವೂ ಒಂದರಲ್ಲಿ ಬರುವುದೇ ಪರ್ವತಾರೋಹಣ. ನಮ್ಮ ಸಂತೋಷಕ್ಕೇ ಬೆಟ್ಟ ಹತ್ತಿ ಇಳಿಯುವುದು ಪರ್ವತಾರೋಹಣ. ಹಿಂದೆ ಹೇಳಿದಂತೆ ಬ್ರಿಟಿಷರ ಕಾಲದಲ್ಲಿ ಭಾರತದ ಬೆಟ್ಟಗಳಿಗೆ ಮಹತ್ವ ಬಂತು. ಆಗಲೇ ಪರ್ವತಾರೋಹಣವೂ ಹವ್ಯಾಸವಾಗಿ ಭಾರತದಲ್ಲಿ ತೊಡಗಿತು.

ಉದ್ಯೋಗದಲ್ಲಿ ಮೇಲೇರುವುದನ್ನು ಕೇಳಿದ್ದೀರಿ. ಬುದ್ಧಿ ಶಕ್ತಿಯಲ್ಲಿ ಎತ್ತರದ ಸಾಧನೆ ನೀವೇ ಮಾಡುತ್ತಿದ್ದೀರಿ. ಆದರೆ ಇವೆಲ್ಲವನ್ನೂ ವಿವರಿಸುವುದು ಕಷ್ಟ. ಪರ್ವತಾರೋಹಣ ಏರುವಿಕೆಯ ನಿಜ ಅನುಭವವನ್ನು ಕೊಡುತ್ತದೆ. ಎತ್ತರಕ್ಕೆ ಸರಿದಂತೆ ಪರಿಸರದ ಬದಲಾವಣೆ ಗುರುತಿಸಬಹುದು. ನಮ್ಮ ಸಾಧನೆಯ ಹೆಜ್ಜೆಗಳನ್ನು ಅಳೆಯಬಹುದು. ನಮ್ಮ ಶಕ್ತಿ, ಮಿತಿಗಳನ್ನು ಕಂಡುಕೊಳ್ಳಬಹುದು.

ಬೆಟ್ಟಗುಡ್ಡಗಳ ಸವಾಲನ್ನು ಎದುರಿಸುವುದು ಪರ್ವತಾರೋಹಣದ ತಂತ್ರ. ಇದು ಪ್ರತಿ ಬಂಡೆ, ಬೆಟ್ಟಕ್ಕೂ ಬದಲಾಗಬಹುದು. ಪರ್ವತಾರೋಹಣ ಇಂದು ಒಂದು ಹವ್ಯಾಸ, ಕ್ರೀಡೆಯಾಗಿಯೇ ಉಳಿದಿಲ್ಲ. ಸ್ವತಂತ್ರ ಉದ್ಯಮವೇ ಆಗಿದೆ. ಪರ್ವತಾರೋಹಣದಲ್ಲಿ ಮುಖ್ಯವಾಗಿ ನಾಲ್ಕು ಅಂಗಗಳು.

೧.) ಚಾರಣ, ಅಂದರೆ ಬೆಟ್ಟಗುಡ್ಡಗಳ ಮೇಲಿನ ನಡಿಗೆ. ೨) ಶಿಲಾತಂತ್ರ : ಚಾರಣದಲ್ಲಿ ಬಂಡೆ ಹಾಸೋ, ಗುಂಡೊ ಎದುರಾಗುವುದುಂಟು. ಅದರ ರಚನೆಯನ್ನು ಅನುಸರಿಸಿ ಪಾರುಗಾಣುವ ತಂತ್ರ ಶಿಲಾತಂತ್ರ. ಬಂಡೆ ಹತ್ತಿದ ಕ್ರಮ ಇಳಿಯುವಲ್ಲಿ

ಉಪಯೋಗಕ್ಕೆ ಸಿಕ್ಕದಿರಬಹುದು. ದೇಹದ ವಿಚಿತ್ರ ಭಂಗಿಗಳು ಬೇಕಾಗಬಹುದು. ವಿಶೇಷ ಸಲಕರಣೆಗಳ ಸಹಾಯವೂ ಪಡೆಯಬಹುದು. ಈ ಎಲ್ಲವನ್ನು ಊಹಿಸಿ, ಅಭ್ಯಾಸ ಮಾಡಿದವನು ಶಿಲಾರೋಹಿ. ೩). ಶಿಬಿರವಾಸ. ಸಣ್ಣ ಬೆಟ್ಟಗಳನ್ನೂ ಒಂದೇ ದಿನದಲ್ಲಿ ಹತ್ತಿಳಿಯಬಹುದು. ರಾತ್ರಿವಾಸ ಒಂದು ಸಮಸ್ಯೆ ಅಲ್ಲ. ಆದರೆ ದಿನಗಟ್ಟಳೆ ಶ್ರೇಣಿಗಳಲ್ಲಿ ನಡೆಯುವುದು ಹಾಗಲ್ಲ. ಎವರೆಸ್ಟ್ ಏರುವುದು ಕೆಲವು ವಾರಗಳ ಕಾರ್ಯಕ್ರಮ. ಅಂಥಲ್ಲಿ ಊಟ, ವಾಸಕ್ಕೆ ತಾತ್ಕಾಲಿಕ ನೆಲೆ ಕಲ್ಪಿಸುವುದು ಶಿಬಿರವಾಸ. ೪). ಹಿಮತಂತ್ರ. ಶಿಲಾ ತಂತ್ರದಂತೇ ಇದು ಹಿಮಕ್ಕೆ ಸಂಬಂಧಿಸಿದ್ದಾಗಿದೆ. ಇವಕ್ಕೂ ವಿಶೇಷ ಸಲಕರಣೆ, ಪೂರ್ವಾಭ್ಯಾಸ ಅವಶ್ಯ.

## ಉದ್ಯಮದ ಪ್ರವೇಶ

ತಂತ್ರಗಳು, ಸಲಕರಣೆಗಳೊಡನೆ ಉದ್ಯಮ ಬಂತು. ಇದು ಸಂಶೋಧನೆಗಳೊಡನೆ ವಿಪರೀತವಾಗಿ ತೊಡಗಿಕೊಂಡಿದೆ. ಇದಕ್ಕೊಂದು ಉದಾಹರಣೆ, ಪರ್ವತಾರೋಹಣದಲ್ಲಿ ಪಾದರಕ್ಷೆಗಳು ಅವಶ್ಯ. ಅದರಲ್ಲಿ ಇಂದು ಚಾರಣಕ್ಕೆ, ಕಲ್ಲು ಹತ್ತಲು, ಹಿಮತುಳಿಯಲು, ಜಾರಿ ಇಳಿಯಲು, ಜವುಗು ನಡಿಗೆಗೆ, ಚಳಿ ತಡೆಯಲು, ಗಾಳಿಯಾಡಲು, ಅನುಕೂಲವಾಗುವಂತೆ ಗಟ್ಟಿ ಮೂತಿಯವು, ಮಿದು ಒಳಕವಚದವು, ಮಣಿಗಂಟಿನಿಂದ ಮೀನಖಂಡದವರೆಗೆ ಆಧರಿಸುವವು, ಹೀಗೆ ಅನೇಕ ಬಗೆಯವು ಇವೆ.ಇವುಗಳಲ್ಲಿ ದಿಕ್ಸೂಚಿ ಅಳವಡಿಸಿದವು, ದೂರಮಾಪಕ ಇರುವ, ದೀಪಬೆಳಗುವವು ಇತ್ಯಾದಿ ಬಗೆಗಳೂ ಇವೆ. ಮುಂದುವರಿದು ವಿವಿಧ ಬಣ್ಣ,ಬಾಳಿಕೆ, ಮಾರಾಟಾನಂತರ ಸೇವಾಪಟ್ಟಿ ದೊಡ್ಡದಿದೆ. ನೂರಾರು ಕಂಪನಿಗಳು, ಸಾವಿರಾರು ಆಶ್ವಾಸನೆಗಳು ಪರ್ವತಾರೋಹಣ ಉದ್ಯಮದಲ್ಲೂ ಇವೆ.

## ಸಾಹಸ ಅಂದು

ಹಿಂದೆ ಅಂದಾಜು ಮಾರ್ಗಸೂಚಿ ಇಟ್ಟುಕೊಂಡು ಹೊರಡುತ್ತಿದ್ದರು. ಕಠಿಣ ಸುಲಭಸಾಧ್ಯವಾದ ಜಾಡು ಹುಡುಕುತ್ತಿದ್ದರು. ಪರ್ವತಾರೋಹಿಗೆ ತನ್ನ ಬಲವೇ ಬಂಡವಾಳ.

ಸನ್ನಿವೇಶಗಳಲ್ಲಿ ಚುರುಕು ನಿರ್ಧಾರ ತೆಗೆದುಕೊಳ್ಳಬೇಕು. ದಾರಿ ಮುಗಿದಲ್ಲಿ ಹೊಸದಾರಿ ಕಾಣಬೇಕು. ದೃಢವಾಗಿ ಶಿಖರ ಸೇರುವುದು ಸರಿ. ಅಷ್ಟೇ ಆರೋಗ್ಯವಂತನಾಗಿ ಮರಳುವ ಛಲ ಇರುತ್ತಿತ್ತು. ಪರ್ವತಾರೋಹಣ ಒಂದು ಸಮೂಹ ಕ್ರೀಡೆ. ಇಲ್ಲಿ ಒಬ್ಬರೊಳಗೊಬ್ಬರಿಗೆ, ಗುಂಪಿನಿಂದ ಗುಂಪಿಗೆ ಸ್ಪರ್ಧೆಇಲ್ಲ. ಜಾಡು ಅನುಸರಿಸುವಲ್ಲಿ ಮುಂದಿರುವುದೇ ವೀರತನವಲ್ಲ. ಹಿಂದಿದ್ದರೆ ಅವಮಾನವೂ ಅಲ್ಲ. ಶಿಖರ ಸಾಧನೆ, ಮೊದಲು ಮುಟ್ಟಿದ್ದು ಕೇವಲ ದಾಖಲೆಗಳು. ಉದಾಹರಣೆಗೆ ೧). ಮೊದಲು ಎವರೆಸ್ಟ್ ಜಯಿಸಿದವರು ತೇನಸಿಂಗ ಮತ್ತು ಹಿಲರಿ. ಇವರಲ್ಲಿ ಯಾರು ಮೊದಲು ಎಂದು ಗುರುತಿಸಿ ಹೊಗಳಿದವರಿಲ್ಲ. ೨.ಹತ್ತೊಂಬತ್ತನೂರಾ ಐವತ್ತಮೂರರಲ್ಲಿ ಎವರೆಸ್ಟ್‌ನ ಪ್ರಥಮ ವಿಜಯ. ಹಾಗೆಂದು ಈಚೆಗೆ ಎವರೆಸ್ಟ್ ಹತ್ತಿದ ಬಚೇಂದ್ರಿಪಾಲಳ ಸಾಧನೆ ಸಣ್ಣದೆನಿಸಲಿಲ್ಲ

## ಸಾಹಸ ಇಂದು

ಇಂದು ಸಂಶೋಧನೆಗಳೊಡನೆ ಸವಾಲುಗಳೂ ಬೆಳೆದಿವೆ. ಇಂದು ಹೆಚ್ಚಿನ ಶಿಖರಗಳ ಮೇಲೆ ಮನುಷ್ಯ ಹೆಜ್ಜೆ ಮೂಡಿಸಿದ್ದಾನೆ. ಹತ್ತದವು ಕೆಲವು ಇವೆ. ಆದರೆ ಹತ್ತಲಾಗದ ಎತ್ತರ ಎಂಬುದು ಇಲ್ಲ. ಅನುಭವಿಗಳು ಮತ್ತು ಉತ್ಸಾಹಿಗಳು ಹೆಚ್ಚಿದ್ದಾರೆ. ಸಹಜವಾಗಿ ಹಳೆಯ ಸವಾಲುಗಳು ಇಂದು ಉತ್ತರ ಕಂಡಿವೆ.ಶಿಖರಗಳಿಗೆ ಕಠಿಣದಾರಿ ಹುಡುಕುತ್ತಿದ್ದಾರೆ. ವಿಪರೀತ ಹವಾಮಾನಗಳಲ್ಲೇ ಸಾಹಸಯಾತ್ರೆ ಹೊರಡುವುದಿದೆ. ಸಾವಿರದ ಎಂಬೈನೂರ ಅರವತ್ತೈದರಲ್ಲಿ ಒಂದು ಪೂರ್ಣ ಭಾರತೀಯ ತಂಡ ಎವರೆಸ್ಟ್‌ಗೆ ಹೊರಟಿತು. ಅದರ ಸಾಮಾನು ಹೊರಲು ಒಂಬೈನೂರಕ್ಕೂ ಮಿಕ್ಕು ಕೂಲಿಗಳಿದ್ದರು. ಅಂಥವಕ್ಕೆ ಮಜಲು ಯಾತ್ರೆ ಅನ್ನುತ್ತಾರೆ. ಇಂದು ಮಜಲುಯಾತ್ರೆ ಬಿಟ್ಟು ಎವರೆಸ್ಟ್ ಜಯಿಸಿದವರಿದ್ದಾರೆ. ಹಿಮಶಿಖರಕ್ಕೆ ಜಾರು ಮೆಟ್ಟನ್ನೊಬ್ಬ ಒಯ್ದನಂತೆ. ಹಿಂದಿರುಗುವಲ್ಲಿ ಅದನ್ನು ಬಳಸಿ ಜಾರಿ ಬಂದ. ಇನ್ನೊಬ್ಬ ತೇಲು ರೆಕ್ಕೆ ಹೊತ್ತು ಏರಿದ. ಗಂಟೆಗಳಲ್ಲಿ ಏರಿದ ಎತ್ತರ ಮಿನಿಟಿನಲ್ಲಿ ತೇಲಿ ಇಳಿದ. ಹಿಂದೆ ಭಾರೀ ಶಿಖರವೊಂದರ ಸಾಧನೆ ಹಲವರ ಜೀವನಗುರಿಯಾಗಿತ್ತು. ಇಂದು ಎವರೆಸ್ಟನ್ನೇ ಐದಾರುಬಾರಿ ಏರಿದವರಿದ್ದಾರೆ. ಬರಿಯ ಬಂಡೆಹತ್ತುವುದನ್ನು ಹವ್ಯಾಸ

ಮಾಡಿಕೊಂಡವರಿದ್ದಾರೆ. ಆದರೊಳಗೂ ಸಹಜ ತಂತ್ರಗಳನ್ನು ನೆಚ್ಚಿದವರಿದ್ದಾರೆ. ಮೊಳೆಬಡಿದು ಏರುವವರು, ವಿಶೇಷ ಬೋಲ್ಟು ತಂತಿ ಪೋಣಿಸಿ ಹತ್ತುವವರೂ ಇದ್ದಾರೆ.

## ಪರ್ವತಾರೋಹಣ ಸ್ಪರ್ಧೆ

ಮೊದಲು ಪರ್ವತಾರೋಹಣ ಪ್ರದರ್ಶನ ಕ್ರೀಡೆಯಾಗಿರಲಿಲ್ಲ. ಆದರೆ ಇಂದು ತಂತ್ರ ವಿಶೇಷಗಳಿಂದ ಜನರ ಎದುರು ಕ್ರೀಡೆಯಾಗಿ ಬರುತ್ತಿದೆ. ಸಹಜವಾಗಿ ಸ್ಪರ್ಧೆ ಬಂದಿದೆ. ಅದನ್ನು ದೊಡ್ಡ ಹಣ ಹಿಂಬಾಲಿಸಿದೆ. ಕೊನೆಯಲ್ಲಿ ಪರ್ವತಗಳ ಬಗ್ಗೆ ಪ್ರೀತಿಯಿಲ್ಲದವರೂ ಬರುತ್ತಿದ್ದಾರೆ. ಬೆಟ್ಟ ಏರುವ ಸ್ಪರ್ಧೆ, ಬಂಡೆ ಹತ್ತುವದರಲ್ಲಿ ಮೇಲಾಟ ನಡೆದಿದೆ. ಕಾಂಕ್ರೀಟ್ ಕಟ್ಟಡಗಳ ಗೋಡೆಯಲ್ಲಿ ಜಾಡು ಮುಟ್ಟಿಸಿದ್ದೂ ಆಗಿದೆ. ಇವು ಪರ್ವತಾರೋಹಣದಲ್ಲಿ ಯಾಂತ್ರಿಕತೆಯನ್ನೂ ತರುತ್ತಿವೆ.

## ಸಾಹಸ ಪ್ರವಾಸ

ಭಾರತದಲ್ಲಿ ಪರ್ವತಾರೋಹಣದ ಪ್ರೋತ್ಸಾಹಕ್ಕಾಗಿ ಸರಕಾರವೇ ಸಂಸ್ಥೆ ಕಟ್ಟಿದೆ. ಇದನ್ನು ಭಾರತೀಯ ಪರ್ವತಾರೋಹಣ ಪ್ರತಿಷ್ಠಾನ ಎನ್ನುತ್ತಾರೆ. ಕೆಲವು ಪರ್ವತಾರೋಹಣ ತರಬೇತಿ ಶಾಲೆಗಳನ್ನು ನಡೆಸುತ್ತಿದೆ. ಹಿಮಜಾರಾಟ, ಹಿಮನದಿಗಳಲ್ಲಿ ತೆಪ್ಪ ಚಾಲನೆ ಪರ್ವತಾರೋಹಣದ ಅಂಗವಾಗಿತ್ತು. ಇಂದು ಅವು ಸ್ವತಂತ್ರ ಕ್ರೀಡೆಗಳಾಗಿವೆ. ಅದಕ್ಕೂ ಪ್ರತ್ಯೇಕ ತರಬೇತಿ ಶಾಲೆಗಳಿವೆ. ಈ ಸೂಚನೆಗಳನ್ನು ರಾಜ್ಯ ಸರಕಾರಗಳು ಅನುಸರಿಸಿವೆ. ಕರ್ನಾಟಕದಲ್ಲಿ ಜನರಲ್ ತಿಮ್ಮಯ್ಯ ಸಾಹಸ ಅಕಾಡೆಮಿ ಇದೆ. ಖಾಸಗಿಯವರೂ ಸುಮ್ಮನೆ ಕುಳಿತಿಲ್ಲ. ಊರಿಗೊಂದು ಎಂಬಂತೆ ಸಾಹಸ ಸಂಸ್ಥೆಗಳು ಆಗುತ್ತಿದೆ. ಇಂದು ಸಾಹಸ ಪ್ರವಾಸೋದ್ಯಮ ದೊಡ್ಡ ವ್ಯವಹಾರ.

ಪರ್ವತ ಪರಿಸರ ಕಠಿಣವಾದಷ್ಟೇ ಸೂಕ್ಷ್ಮವೂ ಹೌದು. ಇದನ್ನು ತಿಳಿಯದವರು ಉದ್ಯಮಿಗಳು. ಬಂಡೆಗಳನ್ನು ವಿರೂಪಗೊಳಿಸುತ್ತಿದ್ದಾರೆ. ಸಸ್ಯವಿಶೇಷಗಳ ಸೂರೆಯಾಗುತ್ತಿದೆ. ಪಕ್ಷಿ ಪ್ರಾಣಿಗಳು ವಿನೋದಕ್ಕೆ ಬಲಿಯಾಗುತ್ತಿವೆ.ಶಿಬಿರ ಹೂಡಿದಲ್ಲಿ, ನಡೆದ ಜಾಡುಗಳಲ್ಲಿ



ಬೆಟ್ಟಗಳ ನಾಶ

ಕಸ ಎರಚಿದ್ದಾರೆ. ಝುರಿ ಕಣಿವೆಗಳಲ್ಲಿ ನಾಗರಿಕ ಕೊಳೆ ಪೇರುತ್ತಿದೆ. ಪ್ರಖ್ಯಾತ ಗಿರಿಧಾಮ ಕೊಡೈಕೆನಾಲನ್ನೇ ಉದಾಹರಣೆಯಾಗಿ ನೋಡಿ. ಇಲ್ಲಿನ ದೊಡ್ಡ ಕೆರೆ ಪ್ರವಾಸಿಗಳ ಮುಖ್ಯ ಆಕರ್ಷಣೆಯೂ ಹೌದು. ದೋಲ್ ವಿಹಾರ ಇದೆ. ವಿಹಾರದಲ್ಲಿ ಪ್ರವಾಸಿಗರು ಎಸೆದ ಕಚಡಾ ಕೆರೆಯ ತಳವನ್ನು ತುಂಬುತ್ತಿದೆ. ಕೆರೆಯ ಸುತ್ತ ಹೋಟೇಲುಗಳೆದ್ದಿವೆ. ಅವುಗಳ ಮಲ ಕೆರೆಗೇ ಬಂದು ಬೀಳುತ್ತಿದೆ. ಗಿರಿಧಾಮಕ್ಕೆ ವರ್ಷವೂ ಲಕ್ಷಾಂತರ ಪ್ರವಾಸಿಗಳು ಬರುತ್ತಾರೆ. ನೀರಿನ ಅಭಾವ ಸಹಜವಾಗಿ ಹೆಚ್ಚು. ದೊಡ್ಡಕೆರೆ ನೀರೇ, ಕುಡಿಯುವ ಲೋಟ ತುಂಬುತ್ತದೆ. ಈ ಗಿರಿಧಾಮ ಆರೋಗ್ಯಧಾಮವಾದೀತೇ?

ಹಿಮಾಲಯದಲ್ಲಿ ಇಂದು ಸಾವಿರಾರು ಟನ್ನು ಕಚಡಾ ಹರಡಿಹೋಗಿದೆ. ಇದರಲ್ಲಿ ಬಳಸಿ ಎಸೆದ ಕಾಗದ, ಡಬ್ಬ, ಗಾಜು ಪ್ಲಾಸ್ಟಿಕ್ ಹೇಗೂ ಇದೆ. ಖಾಲಿಯಾದ ಗ್ಯಾಸ್ ಸಿಲಿಂಡರುಗಳು, ಅಟ್ಟೆಕಿತ್ತ ಬೂಟು, ಮುರಿದುಹೋದ ಸಲಕರಣೆಗಳು ಸಾವಿರ. ಇಳಿಯುವ ಅವಸರದಲ್ಲಿ ಅನಾವಶ್ಯಕ ಹೊರೆ ಎಂದು ಅನ್ನಿಸುವವೂ ಇವೆ. ಗುಡಾರಗಳು, ಹಗ್ಗ ಮುಂತಾದ ಒಳ್ಳೆ ಸಲಕರಣೆಗಳು, ಆಹಾರ ವಸ್ತುಗಳು ಇತ್ಯಾದಿಯೂ ಇಂದು ಕಚಡಾ ಪಟ್ಟಿಯಲ್ಲಿವೆ. ನೇಪಾಳ ಸರಕಾರ ಇಂದು ಸಾಹಸ ಯಾತ್ರಿಗಳಿಗೆ ಕಚಡಾ ಕರ ವಿಧಿಸುತ್ತದೆ. ದಂಡವೂ ಹಾಕುತ್ತಾರೆ.

## ಕೊನೆಯ ಕರೆ

ಅನುಕೂಲದ ದೃಷ್ಟಿಯಿಂದ ಭಾವುಕ ನಿಯಮಗಳು ಸಡಿಲಿವೆ. ವಿಲಾಸೀ ದೃಷ್ಟಿಯಿಂದ ಪರಿಸರ ನಿಯಮಗಳು ಕುಸಿಯುತ್ತಿವೆ. ಪರ್ವತ ಎಂಬುದು ಪರಿಸರದಿಂದ ಬೇರೆ ಮಾಡಲಾಗದ ಅಂಗ ಇದನ್ನು ಉಳಿಸಿಕೊಳ್ಳುವುದರಲ್ಲಿ ನಮ್ಮ ಉಳಿವಿದೆ.

* * *